

ನಾನೇನು ಮಾಡಿದೆನೊ ವೆಂಕಟರಾಯ
ನೀನೆನ್ನ ಕಾಯಬೇಕೋ
ಮಾನಾಭಿಮಾನವು ನಿನ್ನದು ಎನಗೇನು
ದೀನ ರಕ್ಷಕ ತಿರುಪತಿ ವೆಂಕಟರಮಣಾ

ರಕ್ಕಸ ತನುಜನಲ್ಲೇ ಪ್ರಹ್ಲಾದನು
ಚಿಕ್ಕಪ್ರಾಯದ ಧ್ರುವನು
ಲೆಕ್ಕವಿಲ್ಲದೆ ಪಾಪ ಮಾಡಿದಜಾಮಿಳ ನಿನ್ನ
ಅಕ್ಕನ ಮಗನೇನೋ ರಂಗಯ್ಯ

ಕರಿರಾಜ ಕರೆಸಿದನೆ ದ್ರೌಪದೀದೇವಿ
ಬರೆದೋಲೆ ಕಳುಹಿದಳೇ
ಕರುಣಾದಿಂದಲಿ ಋಷಿಪತ್ನಿ ಶಾಪವ
ಪರಿಹರಿಸಿದೆಯಲ್ಲೋ ರಂಗಯ್ಯ

ಒಪ್ಪಿಡಿಯಕ್ಕಿಯು ನಿನಗೆ ತಂದು
ಒಪ್ಪಿಸಿದವಗೊಲಿದೆ
ಒಪ್ಪವೇ ನಿನಗೆ ಶ್ರೀಪುರಂದರ ವಿಠಲವ
ರಪ್ಪಂತೆ ಎನ್ನ ಕಾಯೋ ರಂಗಯ್ಯ

– ಶ್ರೀ ಪುರಂದರದಾಸರು.

# ಓದುಗರ ಓಲೆ

ಮಾನ್ಯರೆ;

ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ ಎಂದು ಜಾಹೀರು ಮಾಡಿದ್ದೀರಿ. ಸಂತೋಷ. ನಮ್ಮ ಅಭಿಪ್ರಾಯಗಳನ್ನು ತಿಳಿಸಲು ಪತ್ರಿಕೆ ಸಕಾಲದಲ್ಲಿ ಬಿಡುಗಡೆಯಾಗಬೇಕು ಎಂಬ ಮುಖ್ಯ ಅಂಶವನ್ನು ಮರೆಯುವಿರೇಕೆ ?

ನಾರಾಯಣರಾವ್. —ಮೈಸೂರು

(ತಿ.ತಿ.ದೇ. ಸ್ವರ್ಣೋತ್ಸವಗಳಲ್ಲಿನ ಪುಸ್ತಕ ಪ್ರಕಾಶನದ ಕೆಲಸಗಳಿಂದಾಗಿ ತಿ. ತಿ. ದೇ ಮುದ್ರಣಾಲಯದಲ್ಲಿ ಅಧಿಕ ಒತ್ತಡ ವಿದ್ದುದರಿಂದಾಗಿ ಸಪ್ತಗಿರಿ ತುಸು ತಡವಾಯಿತು. ಈ ತಡವನ್ನು ತುಂಬಿಕೊಳ್ಳಲು ಈಗ ಪ್ರಯತ್ನಗಳು ನಡೆಯುತ್ತಿವೆ]

ಸ್ವಾಮಿ;

ಜೂನ್ 84 ರ ಸಪ್ತಗಿರಿಯ ಮಧ್ಯದ ಎಂಟುಪುಟಗಳ ಚಿತ್ರಸಂಪುಟ ನಯನಾನಂದಕರವಾಗಿದೆ. ಈ ಚಿತ್ರ ಸಂಪುಟವನ್ನು ಮುಂದುವರಿಸಿ. ಬ್ರಹ್ಮೋತ್ಸವಗಳ ಸಮಯದಲ್ಲಿ ಈ ಮೊದಲು ಪ್ರಕಟಿಸುತ್ತಿದ್ದಂತೆ ತ್ರಿವರ್ಣ ಚಿತ್ರಸಂಪುಟವನ್ನು ಪ್ರಕಟಿಸಿದಲ್ಲಿ ಸಪ್ತಗಿರಿಯು ಇನ್ನೂ ಹೆಚ್ಚು ಆಕರ್ಷಕವಾಗುತ್ತದೆ.

ರಾಮಚಂದ್ರ ತ್ಯಾಗರಾಜನಗರ.

[ವಿಶೇಷ ಸಂದರ್ಭಗಳಲ್ಲಿ ಚಿತ್ರಸಂಪುಟವನ್ನು ನೀಡಲಾಗುತ್ತದೆ. ಬ್ರಹ್ಮೋತ್ಸವ ಚಿತ್ರಗಳನ್ನು ತ್ರಿವರ್ಣ ಚಿತ್ರಗಳಾಗಿ ನೀಡುವುದೆಂದರೆ ಉತ್ಪಾದನಾವೆಚ್ಚ ಅತಿಹೆಚ್ಚಾಗುವುದು. ಸಪ್ತಗಿರಿಯ ಬೆಲೆಯೂ ಇತರ ಪತ್ರಿಕೆಗಳ ಬೆಲೆ ಏರಿದಂತೆಲ್ಲಾ ಏರಿಲ್ಲ ಎಂಬುದನ್ನು ನೀವು ಗಮನಿಸಿರಬಹುದಲ್ಲವೇ]

ಸ್ವಾಮಿ ; ಜೂನ್ 84 ರ ಸಂಚಿಕೆಯಲ್ಲಿನ ಜಂಬೈ ವೈದ್ಯನಾಥರ ಬಗೆ ಲೇಖನ ಚೆನ್ನಾಗಿದೆ. ಮೂಲ ಲೇಖಕರಿಗೂ ಅನುವಾದಕರಿಗೂ ಅಭಿನಂದನೆಗಳು.

ಎನ್.ಎಸ್. ಪೀತಾಂಬರಯ್ಯ ರಾಮನಗರ.

ಮಾನ್ಯರೆ;

ಗ್ರಂಥಾಂತರಂಗದ ಶೀರ್ಷಿಕೆಯಲ್ಲಿ ತಿ.ತಿ. ದೇವಸ್ಥಾನಗಳ ಎಲ್ಲ ಭಾಷಾ ಪ್ರಕಟನೆಗಳ ಬಗ್ಗೆಯೂ ಪರಿಚಯ ಲೇಖನಗಳನ್ನು ನಿರೀಕ್ಷಿಸಬಹುದೇ?

ನಾಗಪ್ಪ ಹೊಸನಗರ.

( ಹಾಗೆಂದೇ ಐದುಭಾಷೆಗಳಲ್ಲಿಯೂ ಪ್ರಕಟವಾದ ಪುಸ್ತಕವನ್ನು ಮೊದಲಿಗೆ ಪರಿಚಯಿಸಲಾಗಿದೆ. )




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೫] ಜುಲೈ ೧೯೮೮ [ಸಂಚಿಕೆ ೨


# ವಿಷಯಸೂಚಿ

# ಸಂಪಾದಕೀಯ

ಮಾನವ ಇತಿಹಾಸ ಬರ್ಬರತೆಯಿಂದ ಸಭ್ಯತೆಗೆ, ಸಂಸ್ಕೃತಿಗೆ ನಡೆಯುವಲ್ಲಿ ಹಲವಾರು ಮಂದಿ ಹಿರಿಯರು ಮಾರ್ಗದರ್ಶಕರೂ ಮುಂದಾಳುಗಳೂ ಆಗಿ ಜೊತೆಯವರನ್ನು ಕೈಹಿಡಿದು ನಡೆಸಿದ್ದಾರೆ. ಬದುಕಿಗೆ ಅಗತ್ಯವಾದ ಉನ್ನತಿಯತ್ತಣ ಪಯಣದ ಆದರ್ಶವನ್ನು ತಾವು ಕಂಡದ್ದೇ ಅಲ್ಲದೆ ಇತರರಿಗೂ ಮನಗಾಣಿಸಲು ಅಹರ್ನಿಶಿ ದುಡಿದು ಮುಂದಿನವರಿಗೆ ಪ್ರಾತಃಸ್ಮರಣೀಯರಾಗಿದ್ದಾರೆ. ಅಂತಹ ಹಿರಿಯ ಚೇತನಗಳನ್ನು ಜನಾಂಗ ಗುರುವೆಂದು ಗೌರವಿಸಿ ಅವರ ಆದರ್ಶಗಳನ್ನು ಮುಂದಿರಿಸಿಕೊಂಡು ನಡೆದಿದೆ. ಹಲಬಾರಿ ಗುರಿಯನ್ನು ಮುಟ್ಟುವಲ್ಲಿ ಸಫಲವೂ ಆಗಿದೆ.

ಹೀಗೆ ಜನಾಂಗಗಳ ಕಣ್ಣು ತೆರೆಸಿದ ಕಾರಣ ಪುರುಷರು ಭರತಖಂಡದ ಇತಿಹಾಸದಲ್ಲಿ ಅನೇಕರುಂಟು. ಧರ್ಮಾರ್ಥಕಾಮಮೋಕ್ಷಗಳ ಸುಳಿವು ಸೂಕ್ಷ್ಮಗಳನ್ನು ಪ್ರಭು ಸಮ್ಮಿತ, ಮಿತ್ರ ಸಮ್ಮಿತ ಕಾಂತಾಸಮ್ಮಿತಗಳಲ್ಲಿ ವಿವಿಧವಾಗಿ ವಿವರಿಸಿ 'ಗುರು' ಶಬ್ದದ ಪರಿಪೂರ್ಣ ಅರ್ಥ ವೈಶಾಲ್ಯಕ್ಕೆ ಆಶ್ರಯಕಾರಕರಾದ ವ್ಯಾಸರಿಂದ ಆರಂಭವಾಗಿ, ಜೀವ ದೇವರಲ್ಲಿ ಅಭಿನ್ನತೆಯನ್ನು ಕಂಡು, ಆ ಮೂಲಕವಾಗಿಯೇ ಜೀವ ಜೀವರಲ್ಲಿ ಅಭಿನ್ನಸಮಾನತೆಯನ್ನು ಉದ್ಘೋಷಿಸಿದ ಶಂಕರಾಚಾರ್ಯ, ಈ ಅಭಿನ್ನತೆಯಲ್ಲಿ ಒಂದು ವೈಶಿಷ್ಟ್ಯವನ್ನು ಗುರುತಿಸಿ ಸಾಮಾಜಿಕ ಸಮಾನತೆಯನ್ನು ಸಾರಿದ ರಾಮಾನುಜ, ತಾರತಮ್ಯಜ್ಞಾನದಿಂದ ಸಮಾಜವನ್ನು ಸುವ್ಯವಸ್ಥಿತಗೊಳಿಸಲು ಯತ್ನಿಸಿದ ಆನಂದತೀರ್ಥರಂತೆಯೇ, ಭೇದಾಭೇದವನ್ನೂ ಮಧುರಭಾವವನ್ನೂ ಈಶ್ವರೇಕತ್ವವನ್ನೂ ನಿರೂಪಿಸಿದ ರಾಮಾನಂದ, ಚೈತನ್ಯ, ಕಬೀರ, ನಾನಕರೂ ದಯಾನಂದ, ಪರಮಹಂಸ, ವಿವೇಕಾನಂದರೂ ಪರತ್ವಕ್ಕೆ ಪ್ರಾಮುಖ್ಯತೆ ನೀಡಿದಂತೆಯೇ ಇಹಜೀವನ ಸಾಮಂಜಸ್ಯ, ಸೌಹಾರ್ದತೆ, ಸಹಾನುಭೂತಿಗಳಿಗೆ ಒತ್ತು ನೀಡಿದವರೇ ಆಗಿದ್ದಾರೆ.

ಇಂತಹದೊಂದು ಭವ್ಯ ಗುರುಪರಂಪರೆಯನ್ನು ಪಡೆದ ಭಾರತ ಇಡೀ ಜಗತ್ತು ಬಾಲ್ಯಾವಸ್ಥೆಯಲ್ಲಿದ್ದಾಗಲೇ ಚಿಂತನೆಯ ಪ್ರೌಢಾವಸ್ಥೆಯನ್ನು ಮುಟ್ಟಿ ಜೀವನದ ಇತಿಮಿತಿಗಳನ್ನು ಗುರುತಿಸಲು ಶಾಂತಿ ಸೌಹಾರ್ದತೆಯ ತಿರುಳನ್ನು ತಿಳಿಯಲು ಪ್ರಯತ್ನಿಸುತ್ತಿತ್ತು ಎಂಬುದೂ ಸಹಜ ಸಿದ್ಧವೇ ಆದದ್ದು. ಎಂತಲೇ ಇಲ್ಲಿ ಅಹಿಂಸೆಯ ಪರಮಧರ್ಮವನ್ನು ಕಾಣುವುದು. ಆಗೊಮ್ಮೆ ಈಗೊಮ್ಮೆ ಹೊರಗಣ ದಬ್ಬಾಳಿಕೆ ದೌರ್ಜನ್ಯಗಳನ್ನೆದುರಿಸಲು ಹಿಂದೂಗಳು ಸಂಘಟಿತರಾಗಿರಬಹುದು, ಶಸ್ತ್ರವನ್ನೂ ಹಿಡಿದಿರಬಹುದು. ಅಲ್ಲಿಯೂ ವಿದ್ಯಾರಣ್ಯ, ಗುರುಗೋವಿಂದಸಿಂಹ, ರಾಮದಾಸ ಮೊದಲಾದ ಗರುಗಳೇ ಮಾರ್ಗದರ್ಶಕರಾಗಿದ್ದರು ಎಂಬುದನ್ನು ಮರೆಯುವಂತಿಲ್ಲ, ಆದರೆ ಈ ಶಸ್ತ್ರಗ್ರಹಣದ ಕಾಲ ತುಂಬ ಕಡಮೆಯದಾಗಿ ಅದು ಹೊರಗಣ ಶಕ್ತಿಯ ವಿರುದ್ಧ ಸೆಣಸುವ ಉದ್ದೇಶದಿಂದ ಕೂಡಿತ್ತು ಎಂಬುದನ್ನೂ ನೆನಪಿನಲ್ಲಿಡಬೇಕು.

ಇತಿಹಾಸದಿಂದ ಸಮಾಜಕ್ಕೆ–ನಿನ್ನೆಯಿಂದ ಇಂದಿಗೆ ತಿರುಗಿದಾಗ ಕಾಣುವುದು ಅಷ್ಟೊಂದು ಪ್ರೋತ್ಸಾಹಕರವಾಗಿಲ್ಲ ಎಂಬುದು ಸ್ಪಷ್ಟ. ಅರ್ಥವಿಲ್ಲದ, ಅಗತ್ಯವಿಲ್ಲದ ಕ್ಷೋಭೆಯನ್ನುಂಟುಮಾಡತಕ್ಕ ದೃಶ್ಯಗಳನ್ನು ಮೂಡಿಸಲಾಗುತ್ತಿದೆ. ಧರ್ಮಕ್ಷೇತ್ರವನ್ನು ಕುರುಕ್ಷೇತ್ರವನ್ನಾಗಿಸಲಾಗುತ್ತಿದೆ. ಅಭಿವೃದ್ಧಿ ಪರವಾಗಿ ಸಾಗಬೇಕಾದ ಸಹಬಾಳ್ವೆ ಸಹನೆಯಿಲ್ಲದ ದಾಂಪತ್ಯವಾಗುತ್ತಿದೆ. ಹಿಂಸೆ ಪ್ರತಿಹಿಂಸೆಗಳ ಸೆಳವಿನಲ್ಲಿ ಸಹಜ ಶಾಂತಿ ಕೊಚ್ಚಿ ಹೋಗುತ್ತಿದೆ.

ಗುರುಗಳ ಗ್ರಂಥ ರಾಶಿಯನ್ನು ಓದದೆ ಪೂಜೆ ಮಾಡುತ್ತಿದ್ದೇವೆಯೇ ? ಹರಮಂದಿರಗಳ ಪಾವಿತ್ರ್ಯವನ್ನು ಅರಿಯಲಾರದವರಾಗಿದ್ದೇವೆಯೇ ? ತತ್‌ಕ್ಷಣದ ಅಗತ್ಯಗಳ ಪರಿಹಾರಗಳ ಸುಳಿಯಲ್ಲಿ ಸಿಕ್ಕಿ ಶಾಶ್ವತದ ಉಸಿರಿಗೆ ಎರವಾಗುತ್ತಿದ್ದೇವೆಯೇ ? ನಿದಾನವಾಗಿ ಕುಳಿತು ಯೋಚನೆ ಮಾಡಿ ಕಾರ್ಯಗತಿಯನ್ನು ತೀರ್ಮಾನಿಸುವ ಸಹನಶಕ್ತಿಯನ್ನು ಕಳೆದುಕೊಂಡಿದ್ದೇವೆಯೇ ? ಗುರುವನ್ನು ದೈವವೆಂದು ಭಾವಿಸುವ ನಾವೆತ್ತ ಸಾಗುತ್ತಿದ್ದೇವೆ ?

# ನಾಯನಾರರು ಹಾಗೂ ಆಳ್ವಾರರು

ತಮಿಳು ದೇಶದಲ್ಲಿ ಆರನೆಯ ಶತಮಾನದ ಅಂತ್ಯದೊಳಗೆ ಪಾಂಡ್ಯರಾಜ್ಯವು ಪ್ರಬಲವಾಗಿ ಅಲ್ಲಿಂದ ಮೂರು ಶತಮಾನ ಕಾಲ ತನ್ನ ವಿಜಯ ಪತಾಕೆಯನ್ನು ದೇಶದಲ್ಲೆಲ್ಲಾ ಹಾರಿಸಿತು. ಈ ಕಾಲದಲ್ಲಿ ಶೈವವೈಷ್ಣವ ಭಕ್ತರು ಪ್ರತಿಷ್ಠಿತರಾಗಿ ತಮ್ಮ ಭಕ್ತಿ ಪಂಥವನ್ನು ಸ್ಥಾಪಿಸಿ ಬಳಕೆಯಲ್ಲಿದ್ದ ಬೌದ್ಧ ಜೈನ ಪ್ರಭಾವವನ್ನು ಮೂಲೆಗೊತ್ತಿದರು. ಶೈವಭಕ್ತರಿಗೆ ನಾಯನಾರ್ ಎಂದು, ವೈಷ್ಣವ ಭಕ್ತರಿಗೆ ಆಳ್ವಾರರೆಂದು, ಶೈವಗೀತೆಗಳಿಗೆ, "ತೇವಾರ"ವೆಂದೂ, ಆಳ್ವಾರುಗಳ ಕೃತಿಗಳಿಗೆ "ದಿವ್ಯಪ್ರಬಂಧ"ವೆಂದೂ ಹೆಸರು. ತೇವಾರವೂ, ಪ್ರಬಂಧಗಳೂ ಉಚ್ಚಮಟ್ಟದ ಭಕ್ತಿಗೀತೆಗಳು. ಇವುಗಳ ಕರ್ತೃಗಳಾದ ಶೈವ ವೈಷ್ಣವ ಭಕ್ತರು ಭಕ್ತಿಪ್ರೇರಿತರಾಗಿ ಅನುಭಾವಿಗಳಾಗಿ ಈಶ್ವರ ಸಾಕ್ಷಾತ್ಕಾರ ಮಾಡಿಕೊಂಡು ಅದರ ಫಲವಾದ ಜ್ಞಾನಾಮೃತವನ್ನು ಸಾರ್ವತ್ರಿಕವಾಗಿ ಹಂಚುವುದಕ್ಕಾಗಿ ದೇಶದಲ್ಲೆಲ್ಲಾ ಸಂಚಾರಮಾಡಿ ಜನಗಳ ಅಜ್ಞಾನವನ್ನು ಹೊಡೆದೋಡಿಸಿ ಅವರನ್ನು ಪರಮ ಭಾಗವತರನ್ನಾಗಿ ಸೌಖ್ಯದಿಂದ ಬಾಳುವಂತೆ ಮಾಡಿದರು. ಇವರ ಪ್ರಭಾವದಿಂದ ಹಿಂದೂ ಧರ್ಮದ ಭಕ್ತಿಪಂಥವು ದಕ್ಷಿಣಭಾರತದಲ್ಲೆಲ್ಲಾ ಹರಡಿತು. ಈ ಭಕ್ತ ಶಿರೋಮಣಿಗಳ ಪ್ರಭಾವವನ್ನರಿತು ಆಗಿನ ಆಳರಸರೂ ಅವರ ಅನುಯಾಯಿಗಳಾಗಿ ಅವರ ಪಂಥವನ್ನು ಮುಂದುವರಿಸಿದರು. ಪಲ್ಲವ ಮಹೇಂದ್ರವರ್ಮನು ಮೊದಲು ಜೈನನಾಗಿದ್ದು ಶೈವಭಕ್ತರಾದ ಅಪ್ಪರ್ ಅವರ ಪ್ರೇರಣೆಯಿಂದ ಶೈವನಾಗಿ ತನ್ನ ರಾಜ್ಯದಲ್ಲೆಲ್ಲಾ ಅದ್ಭುತವಾದ ಶಿವಾಲಯಗಳನ್ನು ಕಟ್ಟಿಸಿ ಶೈವವಿಗ್ರಹಗಳನ್ನು ಪ್ರತಿಷ್ಠಿಸಿದುದು ಇದಕ್ಕೆ ಪ್ರತ್ಯಕ್ಷ ಸಾಕ್ಷಿ.

ಶೈವನಾಯನಾರುಗಳೂ ವೈಷ್ಣವ ಆಳ್ವಾರುಗಳೂ ಸರಳಭಕ್ತರು, ದಾರ್ಶನಿಕರಲ್ಲ. ಭಗವಂತನು ಶಿವರೂಪದಲ್ಲಾಗಲಿ, ವಿಷ್ಣುರೂಪದಲ್ಲಾಗಲಿ ಅವರಿಗೆ ಪೂಜ್ಯ, ವಂದನೀಯ, ಪ್ರೀತಿಪಾತ್ರ. ಅವನು ಭಕ್ತಿಗೆ ಒಲಿಯುವಂತೆ ತರ್ಕಕ್ಕೆ ಒಲಿಯುವುದಿಲ್ಲ. ಅವನ ಸಾನ್ನಿಧ್ಯವಿಲ್ಲದೆ ಒಂದುಕ್ಷಣವೂ ಬದುಕಲಾರೆನೆಂಬ ಅಜ್ಞಾನಿಗಾದರೂ ಅವನು ಒಲಿದೇ ಒಲಿಯುತ್ತಾನೆ. ಇವರಿಗೆ ಜೀವಾತ್ಮ ಪರಮಾತ್ಮರುಗಳು ಜೊತೆಯಲ್ಲಿರುವುದು ಸಾಧ್ಯವೆಂಬುದು ಅನುಭವಸಿದ್ಧವಾಯಿತು. ಭಗವತ್ಕರುಣಾ ಪ್ರವಾಹವು ಎಲ್ಲರ ಮೇಲೆಯೂ ಹರಿಯಲು ಸಾಧ್ಯವೆಂಬುದಾಗಿ ಇವರು ಜನರಿಗೆ ತಿಳಿಸಿಕೊಟ್ಟರು. ಇವರು ಗಾನಶೀಲರಾಗಲಿ ಇಲ್ಲದಿರಲಿ ಭಗವದ್ಭಕ್ತಿಯಿಂದ ಉದ್ರಿಕ್ತರಾಗಿ ತಮ್ಮ ಭಕ್ತಿಮತ್ತತೆಯನ್ನು ಸಾರಿ ಅನೇಕಜನಗಳ ಮನಸ್ಸನ್ನು ಪರಿವರ್ತಿಸಿದರು. ಅನೇಕರು ಉತ್ತಮ ಗಾಯಕರಾದುದರಿಂದ ಶಾಶ್ವತವಾದ ಭಕ್ತಿರಸ ಪ್ರಧಾನವಾದ ಸಾಹಿತ್ಯವನ್ನು ರಚಿಸಿ ಸಹಾಯ ಮಾಡಿದರು.

ನಂಬಿ ಆಂಡಾಳ್ ನಂಬಿ ಮತ್ತು ನಾಥಮುನಿ ಈ ಇಬ್ಬರು ಈ ಎರಡು ಜಾತಿಯ ಭಕ್ತಿಗೀತೆಗಳನ್ನೂ ಸಂಗ್ರಹಿಸಿ ಮುಂದಿನ ಕಾಲದವರಿಗೆ ಒದಗಿಸಿಕೊಟ್ಟಿದ್ದಾರೆ. ನಂಬಿಯವರು ಶಿವಗೀತೆಗಳನ್ನು ಒಟ್ಟುಗೂಡಿಸಿ ೧೧ "ತಿರುರೈ"ಗಳನ್ನಾಗಿ ವಿಭಾಗಿಸಿದ್ದಾರೆ. ಮೊದಲನೆಯ ಏಳಕ್ಕೆ "ತೇವಾರಮ್" ಎಂದು ಹೆಸರು. (ತೇ = ದೇವರ, ಆರಂ=ಹಾರ) ಇದರಲ್ಲಿ ಸಂಬಂಧರ್, ಅಪ್ಪರ್, ಸುಂದರರ್, ಇವರ ಗೀತೆಗಳಿವೆ. ಎಂಟನೆಯ 'ತಿರುವಾಚಕಮ್' ಮಾಣಿಕ್ಯವಾಚಕರ ಕೃತಿಗಳು. ಒಂಬತ್ತನೆಯ 'ತಿರು ಇಶೈಪ್ಪಾ' ಹಲವಾರು ಭಕ್ತರ ಕೃತಿ ಸಂಗ್ರಹ. ಹತ್ತನೆಯದು ತಿರುಮೂಲಾರರ ಕೃತಿಗಳು, ಹನ್ನೊಂದನೆಯದು 'ತಿರುಮರೈ'. ಇವುಗಳಲ್ಲಿ ನಕ್ಕೀರಾರರಿಂದ ನಂಬಿ ಆಂಡಾಳ್ ನಂಬಿಯವರೆಗಿನ ಎಲ್ಲಾಭಕ್ತರ ಗೀತೆಗಳೂ ಸಂಗ್ರಹೀತವಾಗಿವೆ. ಹಾಗೆಯೇ ನಾಥಮುನಿಗಳು ವೈಷ್ಣವ ಆಳ್ವಾರುಗಳ ಎಲ್ಲಾ ಕೃತಿಗಳನ್ನೂ "ನಾಲಾಯಿರದಿವ್ಯಪ್ರಬಂಧಂ" ಎಂಬ ಹೆಸರಿನಲ್ಲಿ ಶೇಖರಿಸಿದ್ದಾರೆ. ಇವು ೧೨ ಆಳ್ವಾರುಗಳಿಂದ ಅನುಗ್ರಹೀತವಾದುವು. ಇವರಲ್ಲಿ ಆಂಡಾಳ್ ಎಂಬ ಭಕ್ತೆಯೂ ಇದ್ದಾಳೆ. ನಾಲಾಯಿರ ದಿವ್ಯಪ್ರಬಂಧದಲ್ಲಿ ತಿರುಮಂಗೈ, ನಮ್ಮಾಳ್ವಾರ್, ಪೆರಿಯಾಳ್ವಾರ್, ತಿರುಮಳಿಶೈ, ಆಂಡಾಳ್ ಇವರ ಕೃತಿಗಳೇ ಬಹುಭಾಗ.

'ತಿರುಮುರೈ'ಯ ಕರ್ತೃವಾದ ತಿರುಮೂಲರು ದಾಕ್ಷಿಣಾತ್ಯ ಶೈವಸಿದ್ಧಾಂತದ ಪ್ರಸ್ಥಾನಕರೆಂದು ಹೇಳಬಹುದು. ಇವರ 'ತಿರುಮಂತ್ರ'ವು ಬಹು ಗಹನವಾದ ಸಿದ್ಧಾಂತಗ್ರಂಥ. ಇದರಲ್ಲಿ ಅವರು ಸ್ವಾನುಭವದಿಂದ "ಪತಿಪಶುಪಾಶ" ಸಿದ್ಧಾಂತವನ್ನು ನಿರೂಪಿಸಿದ್ದಾರೆ. ಇವರಿಗೆ ಜೀವಾತ್ಮ ಪರಮಾತ್ಮಗಳೆರಡೂ ಸತ್ಯ. ಇವರ ದೃಷ್ಟಿಯಲ್ಲಿ ಪ್ರೇಮವೇ–ಭಕ್ತಿಯೇ–ಶಿವ. ಶಿವನೇ ಪ್ರೇಮ. ಪ್ರೇಮವೇ ಕೊನೆಯಲ್ಲಿ ಶಾಶ್ವತವಾದ ಶಿವನ ರೂಪವನ್ನು ತಾಳುವುದು. ಇದಕ್ಕೆ ಚರ್ಯ, ಕ್ರಿಯ, ಯೋಗ, ಜ್ಞಾನಗಳು ಸಾಧನ. ಕೊನೆಯ ಮೆಟ್ಟಲಿನಲ್ಲಿ ಭಕ್ತನಿಗೆ ಭಗವಂತನ ಕೃಪಾದೃಷ್ಟಿಯಾಗುವುದು. ಇದಕ್ಕೆ ಶಕ್ತಿನಿಪಾತವೆಂದು ಹೆಸರು. ಇವರ ಪ್ರಕಾರ ಸಿದ್ಧಾಂತಗಳು ಶುದ್ಧ, ಅಶುದ್ಧ, ಮಾರ್ಗ, ಕಡಂಶುದ್ಧ ಎಂಬ ನಾಲ್ಕು ಭೇದ. ಶುದ್ಧಸಿದ್ಧಾಂತದಲ್ಲಿ ಸನ್ಮಾರ್ಗ ಪ್ರಾಧಾನ್ಯ. ತಮ್ಮದು ಶುದ್ಧಸಿದ್ಧಾಂತ. ಕಡಂಶುದ್ಧರು ಯಾವ ಬಾಹ್ಯಸಾಧನೆಗಳನ್ನೂ ಅಪೇಕ್ಷಿಸದೆ ಅದ್ವೈತದ ಸದ್ಯೋಮಾರ್ಗಗಳಂತೆ ನೇರವಾಗಿ ಶಿವನಲ್ಲಿ ಐಕ್ಯವಾಗುವರು- "ತಿರುಮಂತ್ರ"ವು ಮೂರುಸಾವಿರ ಮಂತ್ರಗಳಿಂದ ಕೂಡಿ ತಮಿಳು ಶೈವರಿಂದ ವಿಶೇಷವಾಗಿ ಗೌರವಿಸಲ್ಪಟ್ಟಿದೆ. ಇದರಲ್ಲಿ ವೇದ ಮತ್ತು ಆಗಮಗಳ ಸಮನ್ವಯ ಬಹು ತೃಪ್ತಿಕರವಾಗಿ ನಿರೂಪಿತವಾಗಿದೆ.

ಒಂದು ಶತಮಾನ ಕಳೆದ ಮೇಲೆ ಮಾಣಿಕ್ಯವಾಚಕರೂ, ಇತರ ಮೂರು ಸಮಯಾಚಾರ್ಯರುಗಳಾದ ಅಪ್ಪರ್, ಸಂಬಂಧರ್ ಮತ್ತು ಸುಂದರರೂ ಅವತರಿಸಿ ತಮಿಳುನಾಡಿನಲ್ಲಿ ಭಕ್ತಿಕಹಳೆಯನ್ನೂದಿ ಜನರನ್ನು ಎಚ್ಚರಿಸಿ ಭಗವಂತನಲ್ಲಿ ಶರಣಾಗತಿ ಧರ್ಮವನ್ನು ಉಪದೇಶಮಾಡಿದರು. ಇವರೆಲ್ಲಾ ಸುಮಾರು ಏಳನೆಯ ಶತಮಾನದವರು.

ಅಪ್ಪರ್ ಪಲ್ಲವರಾಜನಾದ ಒಂದನೆಯ ಮಹೇಂದ್ರವರ್ಮನ ಕಾಲದವರು. ಇವರು ತಿರುಮುನೈಪ್ಪಾಡಿನ ತಿರುವಾಮೂರು ಎಂಬ ಸ್ಥಳದಲ್ಲಿ ಹುಟ್ಟಿದವರು. ಬಾಲ್ಯದಲ್ಲಿ ಇವರಿಗೆ ಮರುಣೀಕ್ಕಿಯಾರ್ (ಮರುಳನ್ನು ನೀಗಿದವರು) ಎಂಬ ಹೆಸರಿತ್ತು. ವೆಳ್ಳಾಳ ಜಾತಿಯವರು. ಇವರು ಶೈವರಾಗಿದ್ದು ಜೈನರಾಗಿ ಪುನಃ ತಮ್ಮ ಅಕ್ಕನಾದ ತಿಲಕವತಿಯ ಪ್ರೇರಣೆಯಿಂದ ಶೈವರಾಗಿ ಆ ಧರ್ಮವನ್ನು ಪ್ರಚಾರಮಾಡಿ ರಾಜನಾದ ಮಹೇಂದ್ರವರ್ಮನನ್ನು ಶೈವನನ್ನಾಗಿಸಿದರು. ಇವರು ಬಹು ದೀರ್ಘಕಾಲ ಬಾಳಿ ಸಂಬಂಧರೊಡನೆಯೂ ಸ್ವತಂತ್ರರಾಗಿಯೂ ಹಲವು ಶೈವಕ್ಷೇತ್ರಗಳಲ್ಲಿ ತೀರ್ಥಯಾತ್ರೆಮಾಡಿ ಬಗೆಬಗೆಯಾಗಿ 'ತೇವಾರ'ವನ್ನು ಹಾಡಿ ತಿರುವೂಗಲೂರಿನಲ್ಲಿ ಶಿವೈಕ್ಯರಾದರು. ಇವರಿಗೆ

ಡಾ॥ ಎನ್. ಅನಂತರಂಗಾಚಾರ್

ತಿರುನಾವಕ್ಕರಸು, ತಾಂಡಕರಾಜ, ವಾಗೀಶರ್ ಮೊದಲಾದ ಹೆಸರುಗಳುಂಟು. 'ತೇವಾರ'ದಲ್ಲಿ ಇವರ ೩೧೩ ಗೀತೆಗಳಿವೆ. ಅವುಗಳ ನಾದ ಮಾಧುರ್ಯ, ವಿಷಯಗೌರವ, ಭಕ್ತಿಭಾವನೆ ಅವರ ತುಂಬು ಜೀವನದ ಪ್ರತಿಬಿಂಬವಾಗಿ ಜ್ಞಾನಭಕ್ತಿಗಳಿಂದ ಪರಿಪುಷ್ಟವಾಗಿವೆ. ಅವು ಸಾಮಾನ್ಯ ಜನರನ್ನೇ ಕುರಿತದ್ದು. ಪ್ರಕೃತಿ ಚಿತ್ರಗಳಿಂದ ಆಹ್ಲಾದಕರವಾಗಿವೆ.

ಪಲ್ಲವರಾಜನಾದ ಇಮ್ಮಡಿ ಮಹೇಂದ್ರವರ್ಮನ ಕಾಲದವರು ತಿರುಜ್ಞಾನ ಸಂಬಂಧರು. ತಿರುಮಂಗೈ ಆಳ್ವಾರ್ ಸಮಕಾಲೀನರು. ತಂದೆ ಶಿವಪಾದಹೃದಯರು, ತಾಯಿ ಭಗವತಿ ಅಮ್ಮೈಯಾರ್, ಶೀರ್ಕಾಳಿ (ಈಗಿನ ಶಯ್ಯಾಳಿ) ಯಲ್ಲಿ ಬ್ರಾಹ್ಮಣ ಕುಲದಲ್ಲಿ ಪರಮಾತ್ಮನ ವರಪ್ರಸಾದದಿಂದ ಹುಟ್ಟಿದವರು. ತಮ್ಮ ಮೂರನೆಯ ವರ್ಷದಲ್ಲಿಯೇ ಒಂದು ಕೊಳದ ಸಮೀಪದಲ್ಲಿ ಶಿವಪಾರ್ವತಿಯರನ್ನು ಕಂಡು ಅವರ ಸ್ತೋತ್ರರೂಪವಾದ ಅನೇಕ 'ತೇವಾರ'ಗಳನ್ನು ಹಾಡಿದರು. ಅಲ್ಲಿಂದ ಮುಂದೆ ತಂದೆಯ ಕಂಕುಳಿನಲ್ಲಿಯೇ ಶೈವಕ್ಷೇತ್ರಗಳನ್ನೆಲ್ಲಾ ಸಂದರ್ಶಿಸಿ, ಅಪ್ಪರನ್ನು ಸಂಧಿಸಿ ಜೈನಮತವನ್ನು ಖಂಡನ ಮಾಡಿ ಜಯಶೀಲರಾಗಿ ಶಿವೈಕ್ಯರಾದರು. ಇವರು ಸಾವಿರಕ್ಕಿಂತ ಹೆಚ್ಚಿನ ಗೀತೆಗಳನ್ನು ರಚಿಸಿದ್ದಾರೆಂದು ಪ್ರತೀತಿಯಿದ್ದರೂ ೩೮೪ ಮಾತ್ರ ಉಪಲಬ್ಧವಾಗಿವೆ. ಇವು ಬೆಡಗು ವಿಲಾಸಗಳಿಂದ ಕೂಡಿದ್ದರೂ ಸ್ವಲ್ಪ ಕ್ಲಿಷ್ಟ. ಅಚ್ಚ ತಮಿಳು ಶೈಲಿಯಲ್ಲಿದೆ. ಸಂಬಂಧರು ಉಪದೇಶಮಾಡಿದ ಉಪಾಸನಾ ರೀತಿ ಸತ್ಪುತ್ರ ಮಾರ್ಗ. ಸಂಬಂಧರ 'ಪದಿಕ'ಗಳಲ್ಲಿ ಕಂಡುಬರುವ ಪ್ರಧಾನ ವಿಷಯವೆಂದರೆ ಅವರಿಗೆ ಜೈನರಲ್ಲಿದ್ದ ಅಸಹ್ಯತೆ; ಅವರು ಜನರನ್ನು ದುರ್ಮಾರ್ಗಕ್ಕೆ ಎಳೆಯುತ್ತಿದ್ದಾರೆಂಬುದನ್ನು ತಮ್ಮ ಗೀತೆಗಳಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ನಾಸ್ತಿಕರನ್ನು ಎದುರಿಸಿ ಆಸ್ತಿಕ ಶೈವ ಪಂಥವನ್ನು ಸ್ಥಾಪಿಸುವುದಕ್ಕಾಗಿಯೇ ಅವತರಿಸಿದ್ದುದು. ದಕ್ಷಿಣ ಭಾರತದಲ್ಲಿ ಜೈನಧರ್ಮದ ಅವನತಿಗೆ ಅವರು ಪ್ರಧಾನಕಾರಣವೆಂದು ಊಹಿಸಲ್ಪಟ್ಟಿದೆ. ಇವರು ಮೂರುವರ್ಷವಾಗಿರುವಾಗಲೇ ಮಧುರೆಯ ರಾಣಿಯಾದ ಮಂಗೈಯಕ್ಕರಸಿ ಮತ್ತು ಮಂತ್ರಿಯಾದ ಕುಲಚ್ಚರಿಯಾರರ ಪ್ರೇರಣೆಯ ಮೇಲೆ ಅಲ್ಲಿಂದ ಜೈನರ ಹಾವಳಿಯನ್ನು ತಪ್ಪಿಸಿ ರಾಜನನ್ನು ಶೈವರನ್ನಾಗಿಸಿದರೆಂಬುದು ಅವರ ಚರಿತ್ರೆಯಿಂದ ಕಂಡುಬರುತ್ತದೆ.

ಮಾಣಿಕ್ಯವಾಚಕರ ಜೀವನ ಕಥೆಯು 'ತಿರು–ವಿಳೈಯಾಡಲ್' ಮತ್ತು 'ವಾದವೂರಾರ್'ಪುರಾಣಗಳಲ್ಲಿ ಉಕ್ತವಾಗಿದೆ. ಮಧುರೆಯ ಸಮೀಪದಲ್ಲಿರುವ ವಾದವೂರಿನ ಬ್ರಾಹ್ಮಣಕುಲದವರು ತಮ್ಮ ಮೇಧಾಶಕ್ತಿಯಿಂದ ಪಾಂಡ್ಯದೊರೆಯ ಪ್ರಧಾನಿಯಾಗಿದ್ದು ಅವರ ಪ್ರೀತಿಗೆ ಪಾತ್ರರಾಗಿ ಎಲ್ಲಾ ವಿಧವಾದ ಭೋಗೋಪಭೋಗಗಳನ್ನೂ ಅನುಭವಿಸಿ ಐಹಿಕದಲ್ಲಿ ಜಿಗುಪ್ಸೆಯನ್ನು ತಾಳಿ ತಿರುಪ್ಪೆರುಂತುರೈ ಎಂಬ ಸ್ಥಳದಲ್ಲಿ ಕುದುರೆಗಳನ್ನು ವ್ಯಾಪಾರಮಾಡುತ್ತಿದ್ದಾಗ ಪ್ರತ್ಯಕ್ಷನಾದ ಶಿವನಿಂದ ಶಿವಮಂತ್ರಾಕ್ಷರೀ ಉಪದೇಶವನ್ನು ಪಡೆದು ಶಿವಧ್ಯಾನದಲ್ಲಿ ತೊಡಗಿ ಅನೇಕ ಭಕ್ತಿ ಗೀತೆಗಳನ್ನು ಹಾಡಿ, ಸಂಧಿಸಿದ ಬೌದ್ಧರನ್ನು ಸೋಲಿಸಿ ಕೊನೆಯಲ್ಲಿ ಚಿದಂಬರದಲ್ಲಿ ನೆಲಸಿ ಶಿವೈಕ್ಯರಾದರು. "ತಿರುವಾಚಕ"ವು ಮಾಣಿಕ್ಯವಾಚಕರ ಗ್ರಂಥ. ಇದನ್ನು ದ್ರಾವಿಡ ಉಪನಿಷತ್ತೆಂದು ಕರೆಯಬಹುದು. ಇದರಲ್ಲಿ ಜೀವನು ಅಜ್ಞಾನಾವಸ್ಥೆಯಿಂದ ದಿವ್ಯಜ್ಞಾನಾವಸ್ಥೆಗೆ ಏರಲು ಮಧ್ಯೆಬರುವ ಎಲ್ಲಾ ಮೆಟ್ಟಿಲುಗಳನ್ನೂ ನೋಡಬಹುದು, ಅಥವಾ ಇದನ್ನು ಮಾಣಿಕ್ಯವಾಚಕರ ಆಧ್ಯಾತ್ಮಚರಿತ್ರೆಯೆಂದೂ ಹೇಳಬಹುದು. ಅವರು ಅನುಭವಿಸಿದ ಪ್ರತಿಯೊಂದು ಭಾವವನ್ನೂ ಕಾಣಬಹುದು. ಅವರ ಹೃದಯ ಕವಾಟವು ಅಲ್ಲಿ ತೆರೆದಿಟ್ಟಿದೆ. ಇದು ಎಂತಹ ಪಾಷಾಣಹೃದಯವನ್ನಾದರೂ ಕರಗಿಸಿ ಪಾಪವಿಮುಕ್ತವನ್ನಾಗಿ ಮಾಡುವುದೆಂಬುದು ಸತ್ಯ. 'ತಿರುವಾಚಕ'ವು ತಮಿಳು ಶೈವರ ಸಾರಭೂತವಾದ ಶರಣಾಗತಿತತ್ತ್ವವನ್ನು ಸರಳವಾಗಿ ವರ್ಣಿಸುತ್ತದೆ.

ಸುಂದರರ್ ಅಥವಾ ಸುಂದರಮೂರ್ತಿಯು ಶೈವಸಮಯಾಚಾರ್ಯರಲ್ಲಿ ನಾಲ್ಕನೆಯವರು. ಅವರ ಅತ್ಯಲ್ಪವಾದ ೧೮ ವರ್ಷಗಳಲ್ಲಿ ಅವರು ಜೀವಿಸಿದ ದಿವ್ಯ ಜೀವನ ಆಶ್ಚರ್ಯಕರವಾದುದು. ಇವರು ಸಹಸ್ರಾರು ಗೀತೆಗಳನ್ನು ರಚಿಸಿರುವಂತೆ ಪ್ರತೀತಿಯಿದ್ದರೂ ೧೦೦ ಮಾತ್ರ ಉಪಲಬ್ಧವಾಗಿವೆ. ಇವರ "ತಿರುತ್ತೊಂಡತ್ತೊಗೈ" ಎಂಬ ಗೀತೆಯಲ್ಲಿ ಪ್ರಾಚೀನ ಶೈವಭಕ್ತರನ್ನೆಲ್ಲಾ ಸ್ತುತಿಸಿದ್ದಾರೆ. ಇದೇ ಮುಂದೆ ಬಂದ "ಪೆರಿಯಪುರಾಣ"ಕ್ಕೆ ಆಕರವಾಗಿರಬೇಕು. ಭಗವದ್ಭಕ್ತಿ ಮತ್ತು ಭಾವ ಸೌಂದರ್ಯಗಳಿಂದ ಕೂಡಿದ ಇವರ ಹಾಡುಗಳು ತಮಿಳು ಶೈವರ ಬಾಯ್ನುಡಿಯಾಗಿವೆ.

ಶೈವಸಮಯಾಚಾರ್ಯರುಗಳಾದ ಅಪ್ಪರ್, ಸಂಬಂಧರ್, ಸುಂದರರ್, ಮಾಣಿಕ್ಯವಾಚಕರು ಸನ್ಮಾರ್ಗ, ಸತ್ಪುತ್ರಮಾರ್ಗ, ದಾಸ್ಯಮಾರ್ಗಗಳನ್ನು ಉಪದೇಶಿಸಿದರೆಂದು ಪ್ರಸಿದ್ಧಿಯಾಗಿದೆ.

(33 ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೧೪ ನೆಯ ಅಧ್ಯಾಯ

## ಮೂರು ಗುಣಗಳ ವಿಚಾರ

ಶ್ರೀ ಭಗವಾನುವಾಚ–

ಪರಂ ಭೂಯಃ ಪ್ರವಕ್ಷ್ಯಾಮಿ
ಜ್ಞಾನಾನಾಂ ಜ್ಞಾನಮುತ್ತಮಮ್ ।
ಯಜ್ಜ್ಞಾತ್ವಾ ಮುನಯಃ ಸರ್ವೇ
ಪರಾಂ ಸಿದ್ಧಿಮಿತೋ ಗತಾಃ ॥ 1

ಶ್ರೀಕೃಷ್ಣ: ಯಾವುದನ್ನು ತಿಳಿದುಕೊಂಡು ಎಲ್ಲ ಋಷಿಗಳೂ ಈ ದೇಹದ ಕಟ್ಟಿನಿಂದ ಹೊರಗಾಗಿ ಹೆಚ್ಚಿನ ಫಲವನ್ನು ಪಡೆದರೋ ಅಂಥ ಜ್ಞಾನದೊಳಗೆಲ್ಲ ಉತ್ತಮವಾದ ಜ್ಞಾನವನ್ನು ಇನ್ನಷ್ಟು ಹೇಳುತ್ತೇನೆ.

ಇದಂ ಜ್ಞಾನಮುಪಾಶ್ರಿತ್ಯ
ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ
ಪ್ರಲಯೇ ನ ವ್ಯಥಂತಿ ಚ ॥ 2

ಈ ಜ್ಞಾನವನ್ನು ಅವಲಂಬಿಸಿ ನನ್ನ ಸಾಮ್ಯವನ್ನು ಪಡೆದವರು ಸೃಷ್ಟಿಕಾಲದಲ್ಲಿ ಹುಟ್ಟುವುದೂ ಇಲ್ಲ; ಪ್ರಳಯಕಾಲದಲ್ಲಿ ವ್ಯಥೆಯನ್ನು ಹೊಂದುವುದು ಇಲ್ಲ.

ಮಮ ಯೋನಿರ್ಮಹದ್ಬ್ರಹ್ಮ
ತಸ್ಮಿನ್ ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ
ತತೋ ಭವತಿ ಭಾರತ ॥ 3

ಅರ್ಜುನ, ನಾನು ಜಗತ್ತಿನ ಬೀಜವನ್ನಿಡುವ ಸ್ಥಾನವು. ಮೂಲ ಪ್ರಕೃತಿಯೆನಿಸಿದ ಮಾಯಾಶಕ್ತಿ, ಅದರಲ್ಲಿ ನಾನು ಗರ್ಭವನ್ನು ಇಡುತ್ತೇನೆ.

ಸರ್ವಯೋನಿಷು ಕೌಂತೇಯ
ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿಃ
ಅಹಂ ಬೀಜಪ್ರದಃ ಪಿತಾ ॥ 4

ಅರ್ಜುನ, ಶರೀರದ ಹುಟ್ಟಿಗೆ ಕಾರಣರಾದ ಎಲ್ಲ ಸ್ತ್ರೀಯರಲ್ಲಿಯೂ ಮಾಯಾಶಕ್ತಿಯು ತಾಯಿಸ್ಥಾನವು. ನಾನು ಬೀಜವನ್ನು ಇಡುವ ತಂದೆ.

ಸತ್ತ್ವಂ ರಜಸ್ತಮ ಇತಿ
ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ
ದೇಹೇ ದೇಹಿನಮವ್ಯಯಮ್ ॥ 5

ಅರ್ಜುನ, ಸತ್ತ್ವ, ರಜ, ತಮ ಎಂಬ ಮೂರು ಗುಣಗಳು ಮಾಯಾಶಕ್ತಿಯಿಂದ ಹುಟ್ಟಿದವುಗಳು. ಇವು ನಾಶವಿಲ್ಲದ ಜೀವನನ್ನು ದೇಹದಲ್ಲಿ ಹಾಕುತ್ತವೆ.

ತತ್ರ ಸತ್ತ್ವಂ ನಿರ್ಮಲತ್ವಾತ್
ಪ್ರಕಾಶಕಮನಾಮಯಮ್ ।
ಸುಖಸಂಗೇನ ಬಧ್ನಾತಿ
ಜ್ಞಾನಸಂಗೇನ ಚಾನಘ ॥ 6

ಅರ್ಜುನ, ಆ ಮೂರು ಗುಣಗಳಲ್ಲಿ ಸತ್ತ್ವವು ಕೊಳೆಇಲ್ಲದ್ದಾದ್ದರಿಂದ ಬೆಳಗುವಂತಾದ್ದಾಗಿರುವುದು ಮತ್ತು ದುಃಖವನ್ನು ಬರಗೊಡದಂತಾಗಿರುವುದು. ಇದು ಸುಖ ಮತ್ತು ತಿಳಿವಿನ ಅಭಿಮಾನದಿಂದ ಕಟ್ಟಿಹಾಕುವುದು.

ರಜೋ ರಾಗಾತ್ಮಕಂ ವಿದ್ಧಿ
ತೃಷ್ಣಾ ಸಂಗಸಮುದ್ಭವಮ್ ।
ತನ್ನಿಬಧ್ನಾತಿ ಕೌಂತೇಯ
ಕರ್ಮಸಂಗೇನ ದೇಹಿನಮ್ ॥ 7



ಅರ್ಜುನ, ರಜೋಗುಣವು ಬಯಕೆಯಿಂದಲೂ ಅತಿಪ್ರೀತಿಯಿಂದಲೂ ಹುಟ್ಟಿದ ಅನುರಾಗದ ರೂಪವಾಗಿರುವುದೆಂದು ತಿಳಿ. ಅದು ಆತ್ಮನನ್ನು ತಾನು ಮಾಡುವವನೆಂಬ ಅಭಿಮಾನದಿಂದ ಕಟ್ಟಿಹಾಕುವುದು.

ತಮಸ್ತ್ವಜ್ಞಾನಜಂ ವಿದ್ಧಿ
ಮೋಹನಂ ಸರ್ವದೇಹಿನಾಮ್ ।
ಪ್ರಮಾದಾಲಸ್ಯ ನಿದ್ರಾಭಿಃ
ತನ್ನಿಬಧ್ನಾತಿ ಭಾರತ ॥ 8

ಅರ್ಜುನ, ಎಲ್ಲ ಪ್ರಾಣಿಗಳಿಗೂ ಅವಿವೇಕವನ್ನುಂಟು ತಮೋಗುಣವು ಅಜ್ಞಾನದಿಂದ ಉಂಟಾದದ್ದೆಂದು ತಿಳಿ. ಅದು ತಪ್ಪು ತಿಳಿವಿನಿಂದಲೂ ಸೋಮಾರಿತನದಿಂದಲೂ ನಿದ್ರೆಯಿಂದಲೂ ಕಟ್ಟಿಹಾಕುವುದು.

ಸತ್ತ್ವಂ ಸುಖೇ ಸಂಜಯತಿ
ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ
ಪ್ರಮಾದೇ ಸಂಜಯತ್ಯುತ ॥ 9

ಅರ್ಜುನ, ಸತ್ತ್ವ ಗುಣವು ಸುಖದಲ್ಲಿಯೂ, ರಜೋಗುಣವು ಕರ್ಮವನ್ನು ಮಾಡುವುದರಲ್ಲಿಯೂ, ತಮೋಗುಣವು ವಿವೇಕವನ್ನು ಮುಸುಕಿ ತಪ್ಪುಮಾಡುವುದರಲ್ಲಿಯೂ ಕಟ್ಟಿಗೊಳಪಡಿಸುತ್ತವೆ.

ರಜಸ್ತಮಶ್ಚಾಭಿಭೂಯ
ಸತ್ತ್ವಂ ಭವತಿ ಭಾರತ ।
ರಜಃ ಸತ್ತ್ವಂ ತಮಶ್ಚೈವ
ತಮಃ ಸತ್ತ್ವಂ ರಜಸ್ತಥಾ ॥ 10

ಅರ್ಜುನ, ರಜೋಗುಣವನ್ನೂ ತಮೋಗುಣವನ್ನೂ ಹಿಮ್ಮೆಟ್ಟಿಸಿ ಸತ್ತ್ವಗುಣವೂ, ಅದರಂತೆ ರಜೋಗುಣವನ್ನೂ ಸತ್ತ್ವಗುಣವನ್ನೂ ಕಳೆಗುಂದಿಸಿ ತಮೋಗುಣವೂ ಮತ್ತು ತಮೋಗುಣವನ್ನೂ ಸತ್ತ್ವಗುಣವನ್ನೂ ಮಂಕುಮಾಡಿ ರಜೋಗುಣವೂ ಎದ್ದು ಕಾಣುವುವು.

ಸರ್ವದ್ವಾರೇಷು ದೇಹೇಽಸ್ಮಿನ್
ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾತ್
ವಿವೃದ್ಧಂ ಸತ್ತ್ವಮಿತ್ಯುತ ॥ 11

ಯಾವಾಗ ಈ ದೇಹದಲ್ಲಿ ಎಲ್ಲ ಬಾಗಿಲುಗಳಲ್ಲಿಯೂ ಬೆಳಗುವ ಜ್ಞಾನ ಉಂಟಾಗುವುದೋ ಆಗ ಸತ್ತ್ವಗುಣವು ಮೇಲಕ್ಕೆದ್ದಿತೆಂದು ತಿಳಿಯಬೇಕು.

ಲೋಭಃ ಪ್ರವೃತ್ತಿರಾರಂಭಃ
ಕರ್ಮಣಾಮಶಮಃ ಸ್ಪೃಹಾ ।
ರಜಸ್ಯೇತಾನಿ ಜಾಯಂತೇ
ವಿವೃದ್ಧೇ ಭರತರ್ಷಭ ॥ 12

ಅರ್ಜುನ, ರಜೋಗುಣವು ತಲೆ ಎತ್ತಿದರೆ ಆಸೆ, ಕೆಲಸದಲ್ಲಿ ತೊಡಗುವಿಕೆ, ಕೆಲಸವನ್ನು ಮಾಡುವಿಕೆ ಎಷ್ಟು ಮಾಡಿದರೂ ಸಾಕೆನಿಸದಿರುವುದು, ವಿಷಯಗಳು ಬೇಕೆನಿಸುವುದು ಇವು ಹುಟ್ಟುತ್ತವೆ.

ಅಪ್ರಕಾಶೋಽಪ್ರವೃತ್ತಿಶ್ಚ
ಪ್ರಮಾದೋ ಮೋಹ ಏವ ಚ ।
ತಮಸ್ಯೇತಾನಿ ಜಾಯಂತೇ
ವಿವೃದ್ಧೇ ಕುರುನಂದನ ॥ 13

ಅರ್ಜುನ, ತಮೋಗುಣವು ಮೇಲಕ್ಕೆ ಬಂದರೆ ತಿಳಿಯದಿರುವುದೂ, ಕರ್ಮದಲ್ಲಿ ತೊಡಗಿರುವುದೂ, ತಪ್ಪು ಮಾಡುವುದೂ, ಅವಿವೇಕವೂ ಹುಟ್ಟುತ್ತವೆ.

ಯದಾ ಸತ್ತ್ವೇ ಪ್ರವೃದ್ಧೇ ತು
ಪ್ರಲಯಂ ಯಾತಿ ದೇಹಭೃತ್ ।
ತದೋತ್ತಮವಿದಾಂ ಲೋಕಾನ್
ಅಮಲಾನ್ ಪ್ರತಿಪದ್ಯತೇ ॥ 14

ಜೀವನು ಸತ್ತ್ವಗುಣದ ಹೆಚ್ಚಾಗಿರುವ ಕಾಲದಲ್ಲಿ ಸತ್ತರೆ ಆಗ ಉತ್ತಮರಿಗೆ ದೊರೆಯುವ ಪುಣ್ಯಲೋಕಗಳು ಅವನಿಗೆ ದೊರೆಯುತ್ತವೆ-

ರಜಸಿ ಪ್ರಲಯಂ ಗತ್ವಾ
ಕರ್ಮಸಂಗಿಷು ಜಾಯತೇ ।
ತಥಾ ಪ್ರಲೀನಸ್ತಮಸಿ
ಮೂಢಯೋನಿಷು ಜಾಯತೇ ॥ 15

ರಜೋಗುಣವು ಹೆಚ್ಚಾದಾಗ ಸತ್ತರೆ ಕರ್ಮದ ಆಸಕ್ತಿಯುಳ್ಳವರಲ್ಲಿ ಹುಟ್ಟುತ್ತಾನೆ- ತಮೋಗುಣವು ಹೆಚ್ಚಾದಾಗ ಸತ್ತರೆ ಪಶುಗಳ ಹೊಟ್ಟೆಯಲ್ಲಿ ಹುಟ್ಟುತ್ತಾನೆ.

ಕರ್ಮಣಃ ಸುಕೃತಸ್ಯಾಹುಃ
ಸಾತ್ತ್ವಿಕಂ ನಿರ್ಮಲಂ ಫಲಮ್ ।
ರಜಸಸ್ತು ಫಲಂ ದುಃಖಂ
ಅಜ್ಞಾನಂ ತಮಸಃ ಫಲಮ್ ॥ 16

ಚೆನ್ನಾಗಿ ಮಾಡಿದ ಒಳ್ಳೆ ಕರ್ಮಗಳಿಗೆ ಕೊಳೆ ಇಲ್ಲದ ಸಾತ್ತ್ವಿಕ ಫಲವೆಂದೂ, ರಜೋಗುಣದ ಕರ್ಮಗಳಿಗೆ ದುಃಖವೇ ಫಲವೆಂದೂ, ತಮೋಗುಣಕ್ಕೆ ಅಜ್ಞಾನವು ಫಲವೆಂದೂ ಹೇಳುವರು.

ಸತ್ತ್ವಾತ್ ಸಂಜಾಯತೇ ಜ್ಞಾನಂ
ರಜಸೋ ಲೋಭ ಏವ ಚ ।
ಪ್ರಮಾದಮೋಹೌ ತಮಸಃ
ಭವತೋಽಜ್ಞಾನಮೇವ ಚ ॥ 17

ಸತ್ತ್ವಗುಣದಿಂದ ಜ್ಞಾನವೂ, ರಜೋಗುಣದಿಂದ ಆಸೆಯೂ, ತಮೋಗುಣದಿಂದ ಮರೆವು ಅವಿವೇಕ ಅಜ್ಞಾನಗಳೂ ಹುಟ್ಟುತ್ತವೆ.

ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ
ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾಃ
ಅಧೋ ಗಚ್ಛಂತಿ ತಾಮಸಾಃ ॥ 18

ಸತ್ತ್ವಗುಣದಲ್ಲಿರುವವರು ಮೇಲಿನ ಮೆಟ್ಟಲಿನ ಜನ್ಮಗಳಿಗೆ ಹೋಗುತ್ತಾರೆ. ರಜೋಗುಣದಲ್ಲಿರುವವರು ನಡುವಣ ಜನ್ಮದಲ್ಲಿರುತ್ತಾರೆ. ತಮೋಗುಣದಲ್ಲಿರುವವರು ಕೀಳುಗುಣದ ನಡವಳಿಕೆಯುವರಾಗಿ ಕೆಳಗಣ ಮೆಟ್ಟಲಿನ ಜನ್ಮಗಳಿಗೆ ಇಳಿಯುತ್ತಾರೆ.

ನಾನ್ಯಂ ಗುಣೇಭ್ಯಃ ಕರ್ತಾರಂ
ಯದಾ ದ್ರಷ್ಟಾನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ
ಮದ್ಭಾವಂ ಸೋಽಧಿಗಚ್ಛತಿ ॥ 19

ಯಾವಾಗ ಆತ್ಮನು ಗುಣಗಳಿಂದ ಬೇರೆ ಯಾವುದನ್ನೂ ಈ ಪರಿಣಾಮಕ್ಕೆ ಕಾರಣವಾಗಿ ನೋಡುವುದಿಲ್ಲವೋ ಮತ್ತು ಗುಣಗಳಿಂದ ಅತೀತನಾದ ಭಗವಂತನನ್ನು ತಿಳಿಯುವನೊ ಅವನು ನನ್ನಲ್ಲಿ ನೆಲಸುವನು.

ಗುಣಾನೇತಾನತೀತ್ಯ ತ್ರೀನ್
ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈಃ
ವಿಮುಕ್ತೋಽಮೃತಮಶ್ನುತೇ ॥ 20

ದೇಹದ ಬೀಜಗಳಾದ ಈ ಮೂರು ಗುಣಗಳನ್ನು ದಾಟಿದವನು ಹುಟ್ಟು, ಸಾವು, ಮುಪ್ಪು ಇವುಗಳ ದುಃಖಗಳಿಂದ ಬಿಡುಗಡೆಯನ್ನು ಹೊಂದಿ ಮೋಕ್ಷ ಪಡೆಯುತ್ತಾನೆ.

ಅರ್ಜುನ ಉವಾಚ–
ಕೈರ್ಲಿಂಗೈಸ್ತ್ರೀನ್ ಗುಣಾನೇತಾನ್
ಅತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾನ್
ತ್ರೀನ್ ಗುಣಾನತಿವರ್ತತೇ ॥ 21

ಅರ್ಜುನಃ ಕೃಷ್ಣ ಈ ಮೂರು ಗುಣಗಳನ್ನೂ ದಾಟಿದವನು ಯಾವ ಗುರುತುಗಳುಳ್ಳವನಾಗುತ್ತಾನೆ ? ಅವನ ಆಚಾರವೇನು ? ಅವನು ಹೇಗೆ ಈ ಮೂರು ಗುಣಗಳನ್ನೂ ದಾಟುತ್ತಾನೆ?

ಶ್ರೀ ಭಗವಾನುವಾಚ–
ಪ್ರಕಾಶಂ ಚ ಪ್ರವೃತ್ತಿಂ ಚ
ಮೋಹಮೇವ ಚ ಪಾಂಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ
ನ ನಿವೃತ್ತಾನಿ ಕಾಂಕ್ಷತಿ ॥ 22

ಶ್ರೀಕೃಷ್ಣಃ ಅರ್ಜುನ, ತಿಳುವಳಿಕೆಯೂ ಕರ್ಮದಲ್ಲಿ ತೊಡುಗುವಿಕೆಯೂ ನಿದ್ರೆಮೊದಲಾದವುಗಳೂ ಬಂದರೆ ಅವುಗಳ ಮೇಲೆ ಹಗೆತನವಿಲ್ಲ, ಹೋದರೆ ಅವುಗಳನ್ನು ಬಯಸುವುದಿಲ್ಲ.

ಉದಾಸೀನವದಾಸೀನೋ
ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವ
ಯೋಽವತಿಷ್ಠತಿ ನೇಂಗತೇ ॥ 23

ಸಮದುಃಖಸುಖಃ ಸ್ವಸ್ಥಃ
ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಃ
ತುಲ್ಯನಿಂದಾತ್ಮ ಸಂಸ್ತುತಿಃ ॥ 24

ಮಾನಾಪಮಾನಯೋಸ್ತುಲ್ಯಃ
ತುಲ್ಯೋ ಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ
ಗುಣಾತೀತಃ ಸ ಉಚ್ಯತೇ ॥ 25

ಯಾವನು ಯಾವ ಪಕ್ಷಕ್ಕೂ ಸೇರದವನಂತೆ ಇದ್ದು ಗುಣಗಳಿಂದ ಬದಲಾವಣೆಯನ್ನು ಹೊಂದುವುದಿಲ್ಲವೋ, ದೇಹೇಂದ್ರಿಯಗಳು ವಿಷಯಗಳೊಡನೆ ವ್ಯವಹರಿಸುತ್ತವೆಂದು ತಿಳಿದು, ಯಾವನು ಆ ಸ್ಥಿತಿಯಿಂದ ಕದಲುವುದಿಲ್ಲವೋ, ಅವನು ದುಃಖವನ್ನೂ ಸುಖವನ್ನೂ ಒಂದೇ ರೀತಿ ಕಾಣುತ್ತ ತನ್ನಲ್ಲಿ ತಾನಿರುವನು. ಅವನಿಗೆ ಬಂಗಾರವೂ ಮಣ್ಣು ಹೆಂಟೆಯೂ ಒಂದೇ- ಬೇಕೆನಿಸಿದ್ದು ಬಂದರೂ ಬೇಡವಾದದ್ದು ಬಂದರೂ ಅವನು ಒಂದೇ ರೀತಿ ಇರುವನು- ಅವನು ಬುದ್ಧಿಶಾಲಿ, ಯಾರು ಜರೆದರೂ ಯಾರು ಹೊಗಳಿದರೂ ಅವನಿಗೆ ಒಂದೇ .

ಮಾನವು ದೊರತಾಗಲೂ ಅಪಮಾನವಾದಾಗಲೂ ಅವನು ಒಂದೇ ರೀತಿ ಇರುವನು. ಅವನು ಗೆಳೆಯರನ್ನೂ ಹಗೆಗಳನ್ನೂ ಒಂದೇ ರೀತಿ ಕಾಣುವನು. ಅವನು (ದೇಹೇಂದ್ರಿಯಗಳ ಸುಖಕ್ಕೆಂದು) ಯಾವ ಉದ್ಯೋಗವನ್ನೂ ಹಿಡಿಯದಿರುವನು ಇಂಥವನೇ ಗುಣಗಳನ್ನು ಮೀರಿದವನೆನಿಸುವನು.

ಮಾಂ ಚ ಯೋಽವ್ಯಭಿಚಾರೇಣ
ಭಕ್ತಿಯೋಗೇನ ಸೇವತೇ ।
ಸ ಗುಣಾನ್ ಸಮತೀತ್ಯೈತಾನ್
ಬ್ರಹ್ಮಭೂಯಾಯ ಕಲ್ಪತೇ ॥ 26

ಯಾವನು ನನ್ನನ್ನು ಎಡಬಿಡದೆ ಭಕ್ತಿಯಿಂದ ಸೇವಿಸುತ್ತಾನೋ ಅವನು ಈ ಗುಣಗಳನ್ನು ದಾಟಿ ಜಗತ್ತಿನ ತಾಯಿ ಮಾಯಾಶಕ್ತಿಯಂತೆ ನನಗೆ ಪ್ರಿಯನಾಗುತ್ತಾನೆ.

ಬ್ರಹ್ಮಣೋ ಹಿ ಪ್ರತಿಷ್ಠಾಽಹಂ
ಅಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ
ಸುಖಸ್ಯೈಕಾಂತಿಕಸ್ಯ ಚ ॥ 2

ಸಾವಿಲ್ಲದಂಥದ್ದೂ ಬದಲಾವಣೆಯನ್ನು ಹೊಂದದಿರುವಂಥದ್ದೂ ಆದ ಮಾಯಾಶಕ್ತಿಗೂ ಶಾಶ್ವತ ಧರ್ಮಕ್ಕೂ ಮೋಕ್ಷಸುಖಕ್ಕೂ ನಾನೇ ಆಸರೆ.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಗುಣತ್ರಯ ವಿಭಾಗಯೋಗೋ ನಾಮ ಚತುರ್ದಶೋಽಧ್ಯಾಯಃ

14 ನೆಯ ಅಧ್ಯಾಯವು ಮುಗಿದುದು.

ಯುವವಾಣಿ

# ಗುರುವಿನ ಗರಿಮೆ

"ವಿದ್ಯಾ ದದಾತಿ ವಿನಯಂ"- ವಿದ್ಯೆಯು ವಿನಯವನ್ನು ತಂದುಕೊಡುತ್ತದೆ ಎನ್ನುತ್ತದೆ ಹಿರಿಯರ ನುಡಿ. ಈ ವಿನಯ, ಈ ವಿದ್ಯೆ ದೊರೆಯುವುದಾದರೂ ಎಂತು? ಅದಕ್ಕೊಂದು ಮೂಲ ಬೇಡವೆ? ನದಿಯು ಎಲ್ಲಿಯೋ ಹುಟ್ಟಿ, ಎಲ್ಲಿಯೋ ಹರಿದು, ಬಯಲನ್ನು ತಂಪಾಗಿಯೂ, ಫಲವತ್ತಾಗಿಯೂ ಮಾಡುವಂತೆಯೇ, ಈ ವಿದ್ಯೆಯೆಂಬ ನದಿಯು ಮೂಡಿಬರುವ ಒಂದು ಗಂಗೋತ್ರಿ ಇದೆ. ಅದೇ ಗುರು ಎಂಬ ವ್ಯಕ್ತಿ. 'ವರ್ಣಮಾತ್ರಂ ಕಲಿಸಿದಾತಂ ಗುರು' ಎಂಬ ಮಾತಿನಲ್ಲಿ ಗುರುವಿನ ಅರ್ಹತೆ ಎಂಥದ್ದೇ ಆಗಿರಲಿ, ಅವನಲ್ಲಿ ಪರಿಪೂರ್ಣನಾದ ಜಗದ್ಗುರುವನ್ನು ಕಾಣಬೇಕೆಂಬ ಹಿರಿಯ ತತ್ತ್ವ ಅಡಕವಾಗಿದೆ.

"ಶ್ರದ್ಧಾವಾನ್ ಲಭತೇ ಜ್ಞಾನಂ"- ಶ್ರದ್ಧೆಯಿಂದ ಮಾತ್ರ ಜ್ಞಾನಲಭಿಸುವುದಾದ್ದರಿಂದ ಗುರುವಿನ ಮಾರ್ಗದರ್ಶನದ ಕಡೆಗೆ ಮುಖ್ಯಗಮನ ಹರಿಯಬೇಕು. ಶಿಷ್ಯನ ಶ್ರದ್ಧೆ ಹೆಚ್ಚಿದಂತೆಲ್ಲಾ ಅವನ ಅಜ್ಞಾನ ದೂರವಾಗಿ, ಅವನು ಜ್ಞಾನಿಯಾಗುತ್ತಾ ಮುನ್ನಡೆಯುತ್ತಾನೆ. ಶ್ರೀ ರಾಮಕೃಷ್ಣ ಪರಮಹಂಸರ ಪ್ರಕಾರ "ಗುರು ಕೃಪೆ ಬೀಸುವ ಗಾಳಿಯಿದ್ದಂತೆ, ಮಾನವರ ಹೃದಯಗಳು ಗಾಳಿಪಟಗಳಿದ್ದಂತೆ". ಗಾಳಿ ಸದಾ ಬೀಸುತ್ತಿರುತ್ತದೆ. ಇಚ್ಛೆಯಿದ್ದರೆ ಪಟ ಬಿಚ್ಚಿ ಗಾಳಿಗಾಡಿಸಿ ಆನಂದಿಸಬಹುದು. ಹರಿದಾಸರು "ಗುರುವಿನ ಗುಲಾಮನಾಗದ ನಕ ದೊರೆಯದಣ್ಣ ಮುಕುತಿ" ಎಂದು ಹೇಳಿರುವ ಮಾತು ಗುರುವಿನ ಕಾರ್ಯಕ್ಷೇತ್ರದ ವಿಸ್ತಾರವನ್ನು ಪರಿಚಯಿಸುತ್ತದೆ. ಅಜ್ಞಾನದಿಂದ, ಅನಾಗರಿಕತೆಯಿಂದ, ಅಸಂಸ್ಕೃತಿಯಿಂದ, ಕೊನೆಗೊಮ್ಮೆ ಜೀವನದ ಜಂಜಾಟಗಳಿಂದ ಮುಕ್ತಿಯನ್ನು ಪಡೆಯುವುದು ಹೇಗೆಂಬ ಮಾರ್ಗದರ್ಶನದ ಜೊತೆಗೆ ಪೂರ್ಣ ಸಹಕಾರ, ಸೌಹಾರ್ದತೆಗಳು ಗುರುವಿನಿಂದ ದೊರಕುತ್ತದೆ. ಹೇಗೆಂದರೆ ಅವನು ಆತ್ಮತಮೋಹಾರಿ.

'ಗುರುವೆ ಬ್ರಹ್ಮ ಗುರುವೆ ವಿಷ್ಣು ಗುರುದೇವನೇ ಮಹೇಶ್ವರನು' ಎಂಬ ಮಾತು ಗುರುವಿನ ಸ್ಥಾನದ ಹಿರಿಮೆ – ಗರಿಮೆಗಳನ್ನು ಮಹತ್ತ್ವವನ್ನು ಎತ್ತಿ ಹಿಡಿಯುತ್ತದೆ. ತ್ರಿಮೂರ್ತಿಗಳಿಂದ ಸಾಧಿಸಲಾಗುತ್ತಿರುವ ಸೃಷ್ಟಿ – ಸ್ಥಿತಿ – ಲಯ ಈ ತ್ರಿವಿಧ ಕಾರ್ಯಗಳನ್ನು ಗುರುವೊಬ್ಬನೇ ಮಾಡಬಲ್ಲನು. ವಿದ್ಯಾರ್ಥಿಗಳಲ್ಲಿರುವ ನವನವೋನ್ಮೇಷಶಾಲಿನಿಯೂ, ನವನವೋಲ್ಲೇಖಶಾಲಿನಿಯೂ ಆದ ಪ್ರತಿಭೆಯನ್ನು ಹೊರಹೊಮ್ಮಿಸಿ (ಸೃಷ್ಟಿ) ಅದು ಉಜ್ವಲವಾಗುವಂತೆ ಮಾಡುವ, ಅಮಿತ ಶಕ್ತಿಯುಳ್ಳವನಾದ್ದರಿಂದ ಆತನ ಯೋಗ್ಯತೆಯನ್ನರಿತು ನಡೆಯಬೇಕಾದದ್ದು ಮುಖ್ಯ ಕರ್ತವ್ಯ. ಮೇಲೆ ಹೇಳಿದ ತ್ರಿವಿಧ ಕಾರ್ಯಗಳಲ್ಲಿ ಮೊದಲೆರಡು ಅವನಿಂದ ಯಶಸ್ವಿಯಾಗಿ ನೆರವೇರುವಂತೆ ನೋಡಿಕೊಂಡು, ಮೂರನೆಯದರತ್ತ ಅವನ ಗಮನ ಹರಿಯದಂತೆ ನೋಡಿಕೊಳ್ಳಬೇಕು. ಏಕೆಂದರೆ ಗುರು ಶಾಪ (ಕೋಪ) ಅಪರಿಹಾರ್ಯವಾದದ್ದು. ಮಹಾಭಾರತದ ಕರ್ಣನ ಜೀವನದ ದುರಂತಗಳಿಗೆ ಕಾರಣವಾದ ಅಂಶಗಳಲ್ಲಿ ಗುರು ಶಾಪವೂ ಒಂದು ಎಂಬುದನ್ನು ಮರೆತು ನಡೆಯಲಾಗದು.

ಅಂತೆಯೇ ಗುರುವಿನ ಜವಾಬ್ದಾರಿಯೂ ಮಹತ್ತರವಾದುದಾಗಿದೆ. 'ಯಥಾ ಗುರುಃ ತಥಾ ಶಿಷ್ಯಃ' ಎಂಬ ಅನುಭವದ ಮಾತೊಂದು ಇರುವುದರಿಂದ ಗುರುವಾದವನೂ ಕೂಡ ಆದರ್ಶವ್ಯಕ್ತಿಯಾಗಿರಬೇಕು. ಆತನಲ್ಲಿ ಸನ್ನಡತೆ, ಸದ್ಗುಣ, ಸುಸಂಸ್ಕೃತಿಗಳು, ಸದ್ವಿನಯಾದಿಗಳು ತುಂಬಿದ್ದಾಗ ಮಾತ್ರವೇ ಅವನಿಂದ ವಿದ್ಯೆ ಕಲಿವ ಶಿಷ್ಯನು ಉತ್ತಮ ಜ್ಞಾನ ಪಡೆಯಬಲ್ಲ. ಹಾಗಿಲ್ಲದಿದ್ದರೆ 'ಚೋರ ಗುರು ಚಂಡಾಲ ಶಿಷ್ಯ' ಎಂಬಂತಾಗುತ್ತದೆ ವ್ಯವಹಾರ. ಆದ್ದರಿಂದ ಗುರುವಾದವನು ಆತ್ಮವಿಮರ್ಶೆ, ವಿಶ್ಲೇಷಣೆಗಳಿಗೆ ತನ್ನನ್ನು ತಾನು ಒಳಗಾಗಿಸಿಕೊಳ್ಳಬೇಕು. 'ಬೆರಳ್‌ಗೆ ಕೊರಳ್' ನಾಟಕದಲ್ಲಿ ಒಂದು ಕಡೆ ದ್ರೋಣನು ತನ್ನ ವಿದ್ಯಾ ಶಕ್ತಿಯ ಸಾಧ್ಯಾಸಾಧ್ಯಗಳನ್ನು ವಿಶ್ಲೇಷಿಸಿಕೊಳ್ಳುತ್ತಾ –

ಬಿಂಕಕ್ಕೆ ಡೊಳ್ಳೀವುದದು ವಿದ್ಯೆಯೇ?
ಅವಿದ್ಯೆ!
ತವಿಪುದಾವುದು ಅಹಂಕಾರಮಂ
ಅದು ವಿದ್ಯೆ.
ಮಿಕ್ಕುದೆಲ್ಲ ಅವಿದ್ಯೆ!
ವಿದ್ಯೆಯೆಂಬಾ ಪೆಸರ ಮರೆಯೊಳಾನ್
ಅವಿದ್ಯೆಯಂ ಪೋಷಿಸುವ
ಗುರುವಾದೆನಲ್ತೆ

– ಎಂದು ತಾನು ಹಾದಿ ತಪ್ಪಿ ನಡೆಯುತ್ತಿರುವ ಬಗ್ಗೆ ಪಶ್ಚಾತ್ತಾಪ ಪಡುತ್ತಾನೆ. ಈ ಮಾತು ದ್ರೋಣನಿಗಷ್ಟೇ ಅಲ್ಲ ಪ್ರತಿಯೊರ್ವ ಗುರುವೂ ತನ್ನ ಬಾಳಿಗೆ ಅನ್ವಯಿಕೊಳ್ಳ ಬೇಕು. "ಕಾರ್ಯ ಮಿಂಚಿ ಹೋದರೆ ಅದಕ್ಕೆ ಚಿಂತಿಸಿ ಫಲವಿಲ್ಲ" ದಂತಾಗುತ್ತದೆ. ಕಾರಣ – 'ಆಚಾರ್ಯ ಮಾಗಚ್ಛತಿ ಶಿಷ್ಯದೋಷಃ'. ಕಾರ್ಯ ಮಾಡುವ ಮುನ್ನ ಎಚ್ಚರಿಕೆಯಿಂದ ನಡೆದುಕೊಳ್ಳಬೇಕು. 'ಮಾತೃದೇವೋ ಭವ ಪಿತೃದೇವೋ ಭವ' ಎಂಬುದರ ಜೊತೆಗೆ 'ಆಚಾರ್ಯ ದೇವೋ ಭವ' ಎಂಬ ಮಾತು ಸೇರಿರುವುದರಿಂದ ಮಾತಾ ಪಿತೃಗಳ ಕಾರ್ಯದ ಜವಾಬ್ದಾರಿಯನ್ನು ಆಚಾರ್ಯನು ನಿರ್ವಹಿಸಲು ಸಾಧ್ಯವೆಂಬುದು ಅರಿವಾಗುತ್ತದೆ. ಹೀಗಾಗಿ ಇಂಥ ಗುರು ನೀಡುವ ವಿದ್ಯೆ ಲೋಕಹಿತಕ್ಕಾಗಿ, ಶಿಷ್ಯರಕ್ಷಣೆಗಾಗಿ, ಆತ್ಮ ಸಂರಕ್ಷಣೆಗಾಗಿಯೇ ಹೊರತು ವಿನಾಶಕ್ಕಾಗಿ ಅಲ್ಲ.

(32 ನೇ ಪುಟ ನೋಡಿ)

ಭಾರ್ಗವಿಶ್ರೀ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಕಿಶೋರ ಜಗತ್



## ವಿಜಯನಿಗಾದ ವಿಜಯ

ಅದೊಂದು ಪ್ರಶಾಂತ ತಪೋವನ. ವೇದಾಧ್ಯಯನದ ಸ್ವರಲಹರಿ ಆಶ್ರಮದ ವಾಯುಮಂಡಲದಲ್ಲಿ ತಾನೇ ತಾನಾಗಿ ಅನುರಣಿಸುತ್ತಿದೆ. ಸಾಕಿದ ಜಿಂಕೆಗಳು ಸ್ವಚ್ಛಂದವಾಗಿ ಚಕ್ಕಂದವಾಡುತ್ತಿವೆ. ಅಲ್ಲಲ್ಲಿ ವಟುಗಳು ಸಮಿತ್ಕುಶಾದಿ ಯಜ್ಞಪರಿಕರಗಳನ್ನು ಅಣಿಮಾಡುವುದರಲ್ಲಿ ತಲ್ಲೀನರಾಗಿದ್ದಾರೆ. ಲೋಕಕಲ್ಯಾಣಾರ್ಥವಾಗಿ ಯಜ್ಞಾಗಾರದಲ್ಲಿ, ನಿರಂತರ, ನಿಯಮ ಪೂರ್ವಕವಾಗಿ, ಅಗ್ನಿಕಾರ್ಯಾದಿ ವಿಧ್ಯುಕ್ತ ಕರ್ಮಗಳು ನಡೆಯುತ್ತಿವೆ. ಆಶ್ರಮದ ಕೇಂದ್ರವ್ಯಕ್ತಿ ಗಾಲವ ಮಹರ್ಷಿಗಳು. ಸಹಜ ಗಂಭೀರ ಸ್ವಭಾವದವರು, ಸಂಯಮಿಗಳು, ಪ್ರಸನ್ನಚಿತ್ತರು.

ಒಂದು ದಿನ ಗಾಲವರು ಬ್ರಾಹ್ಮೀ ಮುಹೂರ್ತದಲ್ಲಿ ಸ್ನಾನಾರ್ಥವಾಗಿ ನದಿಗೆ ಹೊರಟರು. ಅರುಣೋದಯ ಸಮಯಕ್ಕೆ ಸರಿಯಾಗಿ, ಭಗವಾನ್ ಭಾಸ್ಕರನಿಗೆ ಅರ್ಘ್ಯ ಪ್ರದಾನ ಮಾಡುವುದು ಅವರ ಪದ್ಧತಿ. ಮಹರ್ಷಿಗಳು ಬೊಗಸೆಯಲ್ಲಿ ನೀರು ಹಿಡಿದು ಗಾಯತ್ರೀ ಪುರಸ್ಸರವಾಗಿ – ಇನ್ನೇನು ಅರ್ಘ್ಯ ನೀಡಬೇಕು – ಅಷ್ಟರಲ್ಲಿ ಆತನ ಬೊಗಸೆಗೆ ಯಾವುದೋ ಅಪವಿತ್ರ ವಸ್ತು ಬಿತ್ತು. ಗಗನ ಮಾರ್ಗದಲ್ಲಿ ಹೋಗುತ್ತಿದ್ದ ಗಂಧರ್ವ ರಾಜ ಚಿತ್ರಸೇನ, ಜಗಿದು ಉಗುಳಿದ ತಂಬುಲವದು. ಗಾಲವರ ಮನಸ್ಸು ಕಸಿವಿಸಿಯಾಯ್ತು. ಆದರೆ ಇದಕ್ಕಾಗಿ ಚಿತ್ರಸೇನನಿಗೆ ಶಾಪ ಕೊಟ್ಟರೆ ತಪಃ ಶಕ್ತಿ ನಾಶವಾಗುತ್ತದೆ. ಗಾಲವರು ಒಂದುಕ್ಷಣ ಯೋಚನೆ ಮಾಡಿದರು. ಆ ಮಹಾತ್ಮನಿಗೇನು ತೋಚಿತೊ !! ಕೈತೊಳೆದು ಕೊಂಡು, ಪುನಃ ಸ್ನಾನಮಾಡಿ, ಶುದ್ಧಾಚಮನ ಮಾಡಿಕೊಂಡು ನೇರವಾಗಿ ದ್ವಾರಕೆಗೆ ಹೊರಟು ಶ್ರೀಕೃಷ್ಣನ ದರ್ಶನ ಮಾಡಿಕೊಂಡರು. ನಡೆದ ವಿಚಾರವೆಲ್ಲ ಆತನಲ್ಲಿ ಬಿನ್ನವಿಸಿಕೊಂಡರು.

ಕೃಷ್ಣನಿಗೂ ಸಹ ಚಿತ್ರಸೇನನ ವರ್ತನೆ ಅನುಚಿತವಾಗಿ ಕಂಡಿತು. ಮಹರ್ಷಿ ಗಾಲವರಿಗಾದ ಅಪಮಾನಕ್ಕೆ ಗಗನಗಾಮಿ ಗಂಧರ್ವರಾಜ ಕಾರಣನೆನ್ನುವುದು ಎಷ್ಟು ಮಟ್ಟಿಗೆ ಸೂಕ್ತ ? ಇದು ಉದ್ದೇಶಪೂರ್ವಕವಾಗಿ ನಡೆದ ಅಪಚಾರವೇ? ನಿರ್ಣಯಮಾಡುವುದು ಕಷ್ಟ. ಗಾಲವರಿಗೆ ಅವಮಾನವಾಯ್ತೆಂದು ಮೇಲ್ನೋಟಕ್ಕೆ ಯಾರಾದರೂ ಹೇಳಬಹುದು. ಕೃಷ್ಣನಿಗೂ ಹಾಗೇ ಭಾಸವಾಯ್ತು. ಮದೋನ್ಮತ್ತನಾಗಿ ವರ್ತಿಸಿದ ಗಂಧರ್ವನಿಗೆ ಶಿಕ್ಷೆಯಾಗಲೇಬೇಕೆಂದು ಆತ ತೀರ್ಮಾನಿಸಿದ. ತಾನೆ ಶಿಕ್ಷೆ ವಿಧಿಸುವುದಾಗಿ ಗಾಲವರಿಗೆ ಭರವಸೆಕೊಟ್ಟ. ಸಂತೋಷಪಟ್ಟ ಮಹರ್ಷಿ ದ್ವಾರಕಾಧೀಶನಿಗೆ ವಂದಿಸಿ ತನ್ನಾಶ್ರಮಕ್ಕೆ ಹೊರಟ.

ಈ ಕಡೆ ದೇವರ್ಷಿ ನಾರದರು ನಂದನಂದನನ ದರ್ಶನಕ್ಕೆ ಬಂದರು. ಕುಶಲ ಪ್ರಶ್ನೆಗಳಾದ ಬಳಿಕ ಕೃಷ್ಣ ಲೋಕಾಭಿರಾಮವಾಗಿ ಗಾಲವರ ಸಮಾಚಾರ ತಿಳಿಸಿದ. ತಾನು ಗಂಧರ್ವರಾಜನನ್ನು ವಧಿಸುವದಾಗಿ ತಿಳಿಸಿದ. ಸಣ್ಣ ವಿಷಯ ಸಿಕ್ಕಿದರೆ ಸಾಕು, ನಾರದರು ಬೆಟ್ಟದಷ್ಟು ಮಾಡುವ ಸ್ವಭಾವದವರು. ಕೃಷ್ಣನಿಂದ ಬೀಳ್ಕೊಂಡು ಅವರು ನೇರವಾಗಿ ಗಂಧರ್ವರಾಜ ಚಿತ್ರಸೇನನ ಬಳಿಗೆ ಬಂದರು. ಗಾಲವರಿಗೆ ಮಾಡಿದ ಅಪಚಾರಕ್ಕೆ ಕೃಷ್ಣ ಕುಪಿತನಾಗಿದ್ದಾನೆಂದೂ–ಇನ್ನು ಕೇವಲ 1–2 ದಿನದಲ್ಲಿ ಅವನ ತಲೆ ತೆಗೆದು ಬಿಡುವ ಪ್ರತಿಜ್ಞೆಯನ್ನು ವಾಸುದೇವ ಮಾಡಿದ್ದಾನೆಂದೂ ವರ್ತಮಾನ ಕೊಟ್ಟರು.

ದೇವರ್ಷಿಯ ಮಾತು ಕೇಳಿ ಗಂಧರ್ವ ಚಿತ್ರಸೇನ ದಿಗ್ಭ್ರಾಂತನಾದ, ಪ್ರಾಣಭಯದಿಂದ ತಲ್ಲಣಿಸಿದ – ಕಾಪಾಡಬೇಕಾದ ಕರುಣಾಳುವೇ ತಲೆ ತೆಗೆಯಲು ನಿರ್ಣಯ ಮಾಡಿದ ಮೇಲೆ ಉಳಿಯುವುದು ಹೇಗೆ – ಕಾಪಾಡುವವರಾರು ? ಚಿತ್ರಸೇನನನ್ನು ಕಾಪಾಡುವುದೆಂದರೆ, ಕೃಷ್ಣನ ಮೇಲೆ ದ್ವೇಷ!! ಈ ಸಾಹಸ ಮಾಡುವ ಗಂಡಾದರೂ ಯಾರು? ಹೇಗಾದರೂ ಮಾಡಿ ಕಾಪಾಡಬೇಕೆಂದು ಗಂಧರ್ವನ ಪತ್ನಿ ನಾರದರ ಪಾದಗಳನ್ನು ಭದ್ರವಾಗಿ ಹಿಡಿದಳು. ದೇವರ್ಷಿಗೆ ಮನ ಕರಗಿತು. ಚಿತ್ರಸೇನನು ತನ್ನ ಪತ್ನಿಯ ಸಹಿತ ಯಮುನಾ ನದೀತೀರಕ್ಕೆ ಹೋಗಬೇಕೆಂದೂ, ಅಲ್ಲಿ ಅರ್ಧರಾತ್ರಿವೇಳೆಯಲ್ಲಿ ಬರುವ ಸ್ತ್ರೀಯನ್ನು ಶರಣಾಗತರಾಗಿ ಬೇಡಿಕೊಂಡರೆ ಆಕೆ ಚಿತ್ರಸೇನನನ್ನು ಖಂಡಿತ ರಕ್ಷಿಸುತ್ತಾಳೆಂದೂ ಉಪಾಯ ಸೂಚಿಸಿದರು. ನಾರದರ ಮಾತಿನಂತೆ ಚಿತ್ರಸೇನ ತನ್ನ ಪತ್ನಿಯರನ್ನೂ ಜತೆಯಲ್ಲಿ ಕರೆದು ಕೊಂಡು ಯಮುನಾನದಿಯತ್ತ ಹೊರಟ.

ಗಂಧರ್ವನಿಂದ ಬೀಳ್ಕೊಂಡ ನಾರದರು ನೇರವಾಗಿ ಅರ್ಜುನನ ಅರಮನೆಗೆ ಬಂದರು. ಆತನ ಧರ್ಮಪತ್ನಿಯಾದ ಸುಭದ್ರೆಯನ್ನು ಕಂಡು ಆತ್ಮೀಯವಾಗಿ ಮಾತಾಡಿದರು. ಆಕೆ ಅವರನ್ನು ಪರಮಗೌರವದಿಂದ ಪೂಜಿಸಿ ಆಗಮನಕಾರಣವೇನೆಂದು ಕೇಳಿದಳು.

ನಾನು ಬಂದದ್ದು ಒಂದು ದೊಡ್ಡ ವಿಷಯಕ್ಕಾಗಿ – ಸುಭದ್ರಾದೇವಿ. ಈ ದಿನ,

**ವಿದ್ವಾನ್ ಬ. ನ. ಗುಂಡೂರಾವ್**

ಅತ್ಯಂತ ಮಹತ್ವಪೂರ್ಣವಾದ ಪರ್ವದಿನ-ಶುಭದಿನ. ನೀನು ಅರ್ಧರಾತ್ರಿ ವೇಳೆಯಲ್ಲಿ ಯಮುನಾ ಜಲಧಾರೆಯಲ್ಲಿ ಸ್ನಾನಮಾಡು, ದೀನರಾಗಿ ಬೇಡಿ ಕೊಂಡವರಿಗೆ ಕೈಲಾದ ಸಹಾಯ ಮಾಡು- ಆ ಸ್ನಾನ - ಈ ಉಪಕಾರ - ನಿನಗೆ ಅನುಪಮ ಪುಣ್ಯಕರವಾಗಿರುತ್ತದೆ. ಈ ವಿಷಯ ಅರಿಕೆ ಮಾಡಲು ಬಂದೆ"

ನಾರದರು ಗಂಭೀರವಾಗಿ ಹೇಳಿದರು.

"ಪೂಜ್ಯರ ಸೂಚನೆ ನನಗೆ ಶಿರೋಧಾರ್ಯ, ತಾವು ನನ್ನ ಮೇಲೆ ಅದೆಷ್ಟು ಅಭಿಮಾನ ವಿಟ್ಟಿದ್ದೀರಿ - ಅದಕ್ಕಾಗಿ ನಾನು ಆಭಾರಿಯಾಗಿದ್ದೇನೆ. ತಮ್ಮ ಸಲಹೆಯಂತೆ ಯಮುನಾ ಸ್ನಾನಕ್ಕೆ ಖಂಡಿತ ಹೋಗುತ್ತೇನೆ. ಈ ಶುಭ ಸಂದರ್ಭದಲ್ಲಿ ಯಾರೇನು ಕೇಳಿ ಕೊಂಡರೂ ಕೊಡುತ್ತೇನೆ. ಆರ್ತರನ್ನು ಕಾಪಾಡುವುದು-ಬೇಡಿದವರಿಗೆ ನೆರವು ನೀಡುವುದು - ಪರಮೋನ್ನತ ಕರ್ತವ್ಯವಲ್ಲವೇ?" ಸುಭದ್ರೆ ಸಂತೋಷವಾಗಿ ಹೇಳಿದಳು.

ಇನ್ನು ಈ ವ್ಯವಹಾರ ಯಾವಾವ ರೂಪ ಪಡೆಯುತ್ತದೋ - ನೋಡಬೇಕೆಂದು ನಾರದರು ತೆರೆಮರೆಗೆ ಸರಿದರು!!

ಸುಭದ್ರಾದೇವಿ, ಪೂಜಾದ್ರವ್ಯಗಳನ್ನು ಸಖಿಯರೊಡನೆ ತೆಗೆಸಿ ಕೊಂಡು, ಯಮುನಾ ಸ್ನಾನಕ್ಕೆ ಬಂದಳು. ಬೆಳುದಿಂಗಳಲ್ಲಿ ಯಮುನೆ ಕಲಕಲನಾದ ಮಾಡುತ್ತ ಹರಿಯುತ್ತಿದ್ದರೆ, ಸುಭದ್ರಾದೇವಿ ತನ್ನಗೆಳತಿಯರೊಡನೆ ನೀರಿಗಿಳಿದು ಚೆಲ್ಲಾಟವಾಡುತ್ತ - ಸ್ನಾನಾನಂತರ - ಯಮುನೆಗೆ ಪೂಜೆಸಲ್ಲಿಸಿ ಹೊರಡುವಷ್ಟರಲ್ಲಿ, ಆಕಡೆಯಿಂದ ಯಾರದೊ ಅಳುಧ್ವನಿ ಕೇಳಿಸಿತು. ಆಲಿಸಿದಾಗ ಅದು ಹೆಂಗಸರ ಧ್ವನಿಯೆಂದು ಸ್ಪಷ್ಟವಾಯ್ತು - ಸುಭದ್ರಾದೇವಿ ಚಕಿತಳಾಗಿ ನೋಡುತ್ತಿದ್ದಂತೆ - ಕೆಲವು ಸ್ತ್ರೀಯರು ಬಂದು - ಆಕೆಯ ಪಾದಗಳ ಮೇಲುರುಳಿ ಬಿದ್ದರು. ಕಣ್ಣೀರ ಧಾರೆಯಿಂದ ಕಾಲು ತೊಳೆದರು. 'ಕೃಪೆ ಮಾಡಬೇಕು - ಪ್ರಾಣ ಭಿಕ್ಷೆ ನೀಡಬೇಕು - ನಮ್ಮ ಮಾಂಗಲ್ಯವನ್ನು ರಕ್ಷಿಸಬೇಕು' - ಎಂದು ಕೇಳಿಕೊಂಡರು.

ಮಾಂಗಲ್ಯವನ್ನು ರಕ್ಷಿಸಬೇಕೆ? ಯಾರು ನೀವು? ನಮಗೆ ಬಂದಿರುವ ವ್ಯಥೆ ಯಾದರೂ ಏನು?

ಸುಭದ್ರೆ ಕೇಳಿದಳು.

ನಾವು ಅನಾಥರಾಗಿದ್ದೇವೆ - ನಮ್ಮ ಕೋರಿಕೆಯನ್ನು ತಾವು ನೆರವೇರಿಸಿ ಕೊಡಬೇಕು- ಆಗಲೆಂದು ಮಾತು ಕೊಟ್ಟರೆ-ವಿಶದವಾಗಿ ತಿಳಿಸುತ್ತೇವೆ. ನಿಮ್ಮ ವಿನಃ

(30ನೇ ಪುಟ ನೋಡಿ)

# ತೊಂಡರಡಿಪ್ಪೊಡಿಯಾಳ್ವಾರ್

ಶ್ರೀ ಕಂದಾಡೈ ಕೇಶವನ್

ತಮೇವ ಮತ್ವಾ ಪರವಾಸುದೇವಂ
ರಂಗೇಶಯಂ ರಾಜ ವದರ್ಹಣೀಯಂ
ಪ್ರಾಬೋಧಕೀಂ ಯೋಕೃತ
ಸೂಕ್ತಿಮಾಲಾಂ
ಭಕ್ತಾಂಘ್ರಿರೇಣುಂ ಭಗವಂತಮೀಡೇ ॥೧॥

ಕೋದಂಡ್ಯೇ ಜ್ಯೇಷ್ಠಾ ನಕ್ಷತ್ರೇ
ಮಂಡಂಗುಡಿ ಪುರೋದ್ಭವಮ್
ಚೋಳೋರ್ವ್ಯಾಂ ವನಮಾಲಾಂಶಂ
ಭಕ್ತ ಪದ್ರೇಣು ಮಾಶ್ರಯೇ ॥

ತಮಿಳುನಾಡಿನ ಆಳ್ವಾರುಗಳ ಪರಂಪರೆಯಲ್ಲಿ ಶ್ರೀ ರಂಗನಾಥನ ದಿವ್ಯ ಸನ್ನಿದಿಯಲ್ಲಿ ಪುಷ್ಪಮಾಲಾ ಕೈಂಕರ್ಯದಲ್ಲಿ ನಿರತರಾಗಿ ತಮ್ಮ ಜೀವಿತವನ್ನು ತೊಡಗಿಸಿಕೊಂಡು ಸ್ವಾಮಿಯ ಕೃಪಾ ಕಟಾಕ್ಷಕ್ಕೆ ಪಾತ್ರರಾದವರಲ್ಲಿ ಭಕ್ತಾಂಘ್ರಿರೇಣು ಅಥವಾ ವಿಪ್ರನಾರಾಯಣ ಎಂಬುವ ಹೆಸರುಗಳಲ್ಲಿ ಕರೆಯಲ್ಪಡುವ ತೊಂಡರಡಿಪ್ಪೊಡಿಯಾಳ್ವಾರ್ ಒಬ್ಬ ಮಹಾಭಕ್ತರು. ಅವರಿಂದ ರಚಿತವಾದ ಚೆಂದಮಿಳಿನ ಅತ್ಯುತ್ತಮವಾದ ಭಕ್ತಿ ಕವಿತೆಗಳಾದ ತಿರುಮಾಲೈ ಮತ್ತು ತಿರುಪ್ಪಳ್ಳಿಯೆಳುಚ್ಚಿ ಎಂಬುವುಗಳನ್ನು ಶ್ರೀ ವೈಷ್ಣವರು ದೇವಸ್ಥಾನಗಳಲ್ಲಿ ಹಾಡುವ ಮುಂಚೆ ಮೇಲಿನ ಅವರ ತನಿಯನ್ ಶ್ಲೋಕಗಳನ್ನು ಹಾಡುವ ಸಂಪ್ರದಾಯ. ಈ ತನಿಯನ್‌ಗಳ ಸ್ಥೂಲಾರ್ಥ ಹೀಗಿದೆ – ರಾಜಾಧಿರಾಜ ಶ್ರೀರಂಗದಲ್ಲಿ ಮಲಗಿರುವ ಶ್ರೀರಂಗರಾಜನನ್ನು ಪರವಾಸುದೇವನೆಂದು ನೆನೆದು ಸುಪ್ರಭಾತವನ್ನು ತಿರುಪ್ಪಳ್ಳಿಯೆಳುಚ್ಚಿ ಎಂಬುವ ದಿವ್ಯ ಪ್ರಬಂಧದಿಂದ ಹಾಡಿದ ಮಹನೀಯರಾದ ಭಕ್ತಾಂಘ್ರಿರೇಣು ಎಂಬುವ ನಾಮಾಂಕಿತರಾದ ತೊಂಡರಡಿಪ್ಪೊಡಿಯಾಳ್ವಾರರನ್ನು ನಾನು ಸ್ತುತಿಸುತ್ತೇನೆ. ಆ ಮಹನೀಯರು ಚೋಳದೇಶದಲ್ಲಿ ಮಂಡಂಗುಡಿ ಎಂಬುವ ಊರಿನಲ್ಲಿ ಕಲಿಯುಗದ ಆದಿ ಭಾಗದಲ್ಲಿ ಪ್ರಭವ ಸಂವತ್ಸರ ಧನುರ್‌ಮಾಸ ಕೃಷ್ಣ ಚತುರ್ದಶಿ ಜ್ಯೇಷ್ಠಾ ನಕ್ಷತ್ರದಲ್ಲಿ ಮಂಗಳವಾರ (ಕ್ರಿ. ಪೂ. 2814 ರಲ್ಲಿ) ವನಮಾಲಾ ಅಂಶವಾಗಿ ಬ್ರಾಹ್ಮಣದಂಪತಿಗಳ ಉದರದಲ್ಲಿ ಅವತರಿಸಿದರು. ಇವರ ತಂದೆಯವರಾದ ವೇದ ವಿಶಾರದರು ಶ್ರೀಮನ್ನಾರಾಯಣನ ಅನನ್ಯ ಭಕ್ತರು. ಹಾಗೂ ಉದ್ದಾಮ ವೇದಪಂಡಿತರು. ತಾಯಿ ಶುದ್ಧ ಸಾತ್ವಿಕಳು.

ಬ್ರಾಹ್ಮಣ ಕುಲದಲ್ಲಿ ಜನಿಸಿದ್ದರಿಂದ ವರ್ಣಾಶ್ರಮ ಧರ್ಮಕ್ಕೆ ತಕ್ಕಂತೆ ಯುಕ್ತಕಾಲದಲ್ಲಿ ಜಾತಕರ್ಮ ನಾಮಕರಣ ಚೌಲ ಉಪನಯನಗಳು ನಡೆದವು ಭಗವತ್ಕೃಪೆಯಿಂದ ಸಕಲ ವಿದ್ಯಾಪಾರಂಗತರಾದರು. ಸಾತ್ವಿಕ ಗುಣಸಂಪನ್ನರಾದ ಇವರು ವೈರಾಗ್ಯ ಮನೋವೃತ್ತಿಯುಳ್ಳವರಾಗಿ, ಅತಿವಿರಕ್ತರಾಗಿ ವೇದವಿಜ್ಞಾನವನ್ನು ತಿಳಿದವರಾಗಿ ಭಗವತ್ ಕೈಂಕರ್ಯದಲ್ಲಿ ನಿರತರಾಗಿದ್ದರು. ಸಪ್ತ ಪ್ರಾಕಾರ ಮಧ್ಯದಲ್ಲಿ ಮಣಿಮಯ ಮಂಟಪದಲ್ಲಿ ಅರಳಿದ ಹೇಮ ವಿಮಾನದಲ್ಲಿ, ಕಾವೇರಿ ಮಧ್ಯದಲ್ಲಿ ಮುಗಿಲು ಮುಟ್ಟುವ ಗೋಪುರಗಳ ಪುರದಲ್ಲಿ ವಿವಿಧ ರತ್ನವಿತಾನ ಶೋಭಿತವಾದ ಜನ ಸಮೂಹವುಳ್ಳ ಶ್ರೀರಂಗನಗರದಲ್ಲಿ, ನಿತ್ಯವೂ ಚಂದ್ರಪುಷ್ಕರಣೀ ತೀರದಲ್ಲಿ ಸ್ನಾನಮಾಡುವ ಶ್ರೀ ಶ್ರೀ ವೈಷ್ಣವ ಸಮುದಾಯದಿಂದ ಕೂಡಿದ ಈ ನಗರದಲ್ಲಿ ನೆಲೆಸಿ ತನ್ನ ಭಕ್ತರ ಅಭೀಷ್ಟಗಳನ್ನು ನೆರವೇರಿಸುವ ಶ್ರೀರಂಗನಾಥನನ್ನು ಕಾಣಬೇಕೆಂಬ ಆಸೆಯುಳ್ಳವರಾಗಿ, ಆ ಪರಮಾತ್ಮನನ್ನು ಸಂದರ್ಶಿಸಿ ಅವನ ದರ್ಶನ ಲಾಭದಿಂದ ಸಂತೋಷಿತರಾಗಿದ್ದರು. ಬೆಳ್ಳಿಯ ಗಿರಿಯ ಮೇಲೆ ಕಾಲ ಮೇಘವು ನಿಂತಂತೆ ಶೇಷತಲ್ಪದ ಮೇಲೆ ಪವಡಿಸಿರುವ ಪರಮಾತ್ಮನ ನಯನ ಮನೋಹರ ಭಾವವನ್ನು ಕಂಡು ಪುಳಕಿತರಾದರು. ಶಂಖ ಚಕ್ರ ಗದಾ ಪಾಣಿಯಾದ, ಪಾದಪದ್ಮ ತಳದಲ್ಲಿ ಕುಳಿತು ಸೇವೆಮಾಡುವ ಭೂನೀಳಾದೇವಿಯರೊಡನೆ ಕೂಡಿರುವ ಶ್ರೀರಂಗನಾಥನನ್ನು ಮತ್ತೆ ಮತ್ತೆ ಕಂಡು ಆನಂದದಿಂದ ಕುಣಿದಾಡಿದರು. 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ' ಎಂಬುವ ಭಕ್ತಿಭಾವದಿಂದ ಶ್ರೀರಂಗನಾಥನ ನಯನ ಮನೋಹರವಾದ ರೂಪವನ್ನು ಕಂಡ ಮೇಲೆ ಮತ್ತೆ ಇನ್ನು ನನಗೇನು ಬೇಕು ಎಂಬುವ ವಿರಕ್ತಿಭಾವ ಬೆಳೆಯಿತು. ಶ್ರೀರಂಗವನ್ನು ಬಿಟ್ಟು ಹೋಗಲು ಮನಸ್ಸಾಗದೆ ಅಲ್ಲಿಯ ಸಮೀಪದಲ್ಲಿ ಇರುವ ತಿರುಕ್ಕರಂಬನೂರ್ ಎಂಬುವ ಗ್ರಾಮದಲ್ಲಿ ನೆಲೆಸಿ ಅಲ್ಲಿ ಒಂದು ಹೂದೋಟವನ್ನು ನಿರ್ಮಿಸಿದರು. ಶ್ರೀರಂಗನಾಥನಿಗೆ ಪ್ರತಿ ನಿತ್ಯವೂ ಪೂಜೆಗೆ ಬೇಕಾದ ಹೂವುಗಳನ್ನು ತುಲಸಿಯನ್ನು ಆ ವನದಲ್ಲಿ ಬೆಳೆಸಿ ಹೂಮಾಲೆ ಕಟ್ಟಿ ಆ ಸ್ವಾಮಿಗೆ ಸಮರ್ಪಿಸಿ ಸಂತೋಷಚಿತ್ತರಾಗುತ್ತಿದ್ದರು. ಪಾಟಲಿ ಪುನ್ನಾಗ, ಪಾರಿಜಾತ, ಅಶೋಕ, ಕೇತಕೀ, ಚಂಪಕ ಹೂವುಗಳ ಪರಿಮಳದಿಂದ ಕೂಡಿದ ಆ ವನ ನಂದನವನದಂತಿತ್ತು. ನಾರಿಕೇಳ, ಖರ್ಜೂರ ಕದಳೀವನಗಳಿಂದ ಶೋಭಿತವಾದ ಆ ವನದಲ್ಲಿ ಬೆಳೆದುನಿಂತ ನಾನಾ ಪುಷ್ಪಗಳೊಡನೆ ತುಲಸೀ ವನವೂ ಬಹು ಆಕರ್ಷಣೀಯವಾಗಿತ್ತು. ಪ್ರತಿ ನಿತ್ಯವೂ ಹೂಮಾಲೆಗಳನ್ನು ಕಟ್ಟಿ, ಶ್ರೀರಂಗನಾಥನಿಗೆ ಸಮರ್ಪಿಸಿ ತಮ್ಮ ಕಾಲವನ್ನು ಕಳೆಯುತ್ತಿದ್ದರು. ಆ ಕಾಲದಲ್ಲಿ ತಿರುಕ್ಕರಂಬನೂರ್ ಗ್ರಾಮದ ಪ್ರಸಿದ್ಧ ನರ್ತಕಿಯಾದ ದೇವದೇವಿ ತನ್ನ ಸಹೋದರಿಯೊಡನೆ ಅರಮನೆಯಿಂದ ಹಿಂತಿರುಗುವಾಗ ಆ ಸುಂದರ ವನವನ್ನು ನೋಡಿ ಆಸೆಯಿಂದ ತೋಟದೊಳಗೆ ಹೋದಳು. ನಾನಾ ಪುಷ್ಪಫಲ ತರುಗಳಿಂದ ಕೂಡಿದ ಆ ವನವನ್ನು ಕಂಡು ಪುಳಕಿತಳಾಗಿ ವಿಶ್ರಮಿಸಿಕೊಳ್ಳಲು ಅಲ್ಲಿ ನೆರಳಿನಲ್ಲಿ ಕುಳಿತಳು. ತನ್ನ ಅಕ್ಕನೊಡನೆ ಮಾತನಾಡುತ್ತ ಇಂತಹ ಸುಂದರ ತೋಟವನ್ನು ನಿರ್ಮಿಸಿದವರು ಒಬ್ಬ ರಸಿಕ ಶಿಖಾಮಣಿಯಿರಬಹುದೆಂದು ಅವರ ಬಗ್ಗೆ ಅಕ್ಕನನ್ನು ಕೇಳಿದಳು. ದೇವದೇವಿಯ ಅಕ್ಕನಾದ ಮಧುರವಾಣಿ "ತಂಗಿ ಈ ವನವನ್ನು ನಿರ್ಮಿಸಿದಾತ ಅದೋ ನೋಡು; ಅಲ್ಲಿ ಗಿಡಗಳಿಗೆ ಪಾತಿಮಾಡಿ ನೀರೆರೆಯುತ್ತಿರುವ ಮಹಾಭಕ್ತ ವಿಪ್ರನಾರಾಯಣರು." ಎಂದಳು. ದೇವದೇವಿ ಅತ್ತ ನೋಡಲು ವಿಪ್ರನಾರಾಯಣರು ಕಣ್ಣೆತ್ತಿ ನೋಡದೆ ದೇವರ ನಾಮಗಳನ್ನು ಹಾಡುತ್ತಾ ತುಲಸೀವನವನ್ನು ಶುಭ್ರಗೊಳಿಸುತ್ತಿದ್ದರು. ದೀರ್ಘ ಕೇಶಗಳಿಂದ ಕೂಡಿದ ಮನೋಹರ ಶಿರವನ್ನುಳ್ಳ, ರುಚಿರಪಕ್ಷ್ಮ ನೇತ್ರಗಳುಳ್ಳ, ಬಿಳಿಯ ವಸ್ತ್ರಗಳಿಂದ ಕೂಡಿದ ಸುಂದರ ದೇಹವುಳ್ಳ, ಕಂಠದಲ್ಲಿ ತುಲಸೀ ನಳಿನಾಕ್ಷ ಮಾಲೆಯನ್ನುಳ್ಳ, ವಿಶಾಲವಾದ ಹಣೆಯಲ್ಲಿ ದ್ವಾದಶೋರ್ಧ್ವಪುಂಡ್ರಧಾರಿಯಾಗಿ ಶೋಭಿಸುವ, ಕಂಗಳಿಗೆ ಆನಂದವೀವ ರೂಪವುಳ್ಳ ವಿಪ್ರನಾರಾಯಣರ ರೂಪ ವೇಷ ಆಕಾರಗಳನ್ನು ಕಂಡು ದೇವದೇವಿ ಮೋಹಿತಳಾದಳು. ತಮ್ಮ ಕರ್ತವ್ಯದಲ್ಲಿಯೇ ನಿರತರಾಗಿರುವ ಬೇರೆಕಡೆ ದೃಷ್ಟಿಯನ್ನು ಕೂಡ ಹರಿಸದ ಆ ವಿಪ್ರನಾರಾಯಣರನ್ನು ತಮ್ಮ ಕಡೆ ಸೆಳೆಯಲು ದೇವದೇವಿ ಕಾಲಿಗೆ ಗೆಜ್ಜೆ ಕಟ್ಟಿ ಮೃದುಮಧುರವಾದ ಹಾಡನ್ನು ಹಾಡುತ್ತಾ ನರ್ತಿಸಿದಳು. ಅನುರಾಗ

ದಿಂದ ಬಳಲಿದ ಅವಳಿಗೆ ವಿಪ್ರನಾರಾಯಣರ ಉದಾಸೀನತೆ, ಮೌನಗಳಿಂದ ಅವಮಾನವಾದಂತೆ ಭಾಸವಾಗಿ ಕಾಮವು ಕೋಪಕ್ಕೆ ತಿರುಗಿತು. “ಈ ವಿಪ್ರನಿಗೆ ಎಷ್ಟು ಅಹಂಕಾರ, ನನ್ನ ಸೌಂದರ್ಯಕ್ಕೆ ಮರುಳಾಗದ ಮನುಷ್ಯನಿಲ್ಲ, ನನ್ನ ಗಾನ ನಾಟ್ಯಕ್ಕೂ ಕೂಡ ಗಮನ ಹರಿಸದ ಈ ಬ್ರಾಹ್ಮಣ ಷಂಡನೋ ಅಥವಾ ಉನ್ಮತ್ತನೋ” ಎಂಬುವುದಾಗಿ ಕೋಪದಿಂದ ತನ್ನ ಅಕ್ಕನನ್ನು ಕುರಿತು ಕೇಳಲು ಅದಕ್ಕೆ ಆಕೆಯು “ತಂಗಿ ಈತ ಶ್ರೀರಂಗನಾಥನ ಮಹಾಭಕ್ತ. ಈತ ನೈಷ್ಠಿಕ ಬ್ರಹ್ಮಚಾರಿ ಹಾಗೂ ಬೇರೆಯವರಿಗೆ ವಶನಾಗುವವನಲ್ಲ” ಎಂದು ಉತ್ತರಕೊಟ್ಟಳು. ವಿಪ್ರನಾರಾಯಣರನ್ನು ತಾನು ವಶಮಾಡಿಕೊಳ್ಳದಿದ್ದರೆ ತನ್ನ ಅಕ್ಕನಿಗೆ ಆರು ತಿಂಗಳು ದಾಸಿಯಾಗಿರುತ್ತೇನೆ ಎಂದು ಪ್ರತಿಜ್ಞೆ ಮಾಡಿದಳು ದೇವದೇವಿ.

ದೇವದೇವಿ ತನ್ನ ಹಠ ಸಾಧನೆಗಾಗಿ ದೀನಳಂತೆ ವೇಷ ಧರಿಸಿ ಅಕ್ಕನನ್ನು ಮನೆಗೆ ಕಳುಹಿಸಿ ವಿಪ್ರನಾರಾಯಣರ ಕುಟೀರಕ್ಕೆ ಬಂದು ಅವರ ಚರಣಗಳಿಗೆ ನಮಸ್ಕರಿಸಿ “ಸ್ವಾಮಿ ನಾನು ಜನ್ಮತಃ ವಾರಾಂಗನೆ, ನನ್ನ ತಾಯಿ ತನ್ನ ದಾರಿಗೆ ನನ್ನನ್ನು ಕೂಡ ಎಳೆಯಲು ಪ್ರಯತ್ನಪಟ್ಟಳು. ಆದರೆ ನನ್ನ ಮನಸ್ಸು ಆ ಪಾಪಕೂಪದಿಂದ ಹೊರಬಂದು ಭಗವತ್ ಭಾಗವತರ ಕೈಂಕರ್ಯದಲ್ಲಿ ನಿರತವಾಗಲು ಮುನ್ನುಗ್ಗಿ ಮನೆ ಮಠ ತೊರೆದು ಈ ಉದ್ಯಾನವನದಲ್ಲಿ ಶ್ರೀರಂಗನಾಥನ ಸೇವೆ ಮಾಡಲು ಬಂದಿದ್ದೇನೆ. ನೀವು ನನಗೆ ಆಶ್ರಯ ಕೊಟ್ಟು ಕಾಪಾಡಬೇಕು. ಅನನ್ಯ ಶರಣಳಾದ ನಾನು ತಮ್ಮ ತಿರುಮಾಲೆ ಕೈಂಕರ್ಯದಲ್ಲಿ ಸಹಾಯಕಳಾಗಿ ಇಲ್ಲಿ ಸೇವೆ ಮಾಡುತ್ತೇನೆ” ಎಂಬುವುದಾಗಿ ಅನೇಕ ವಿಧವಾಗಿ ಪ್ರಾರ್ಥನೆ ಮಾಡಿಕೊಂಡ ಮೇಲೆ ವಿಪ್ರನಾರಾಯಣರು ಆಕೆಯ ಪ್ರಾರ್ಥನೆಗೆ ಓಗೊಟ್ಟು ಆಕೆಯ ಕೋರಿಕೆಯನ್ನು ಮನ್ನಿಸಿದರು. ವಿಪ್ರನಾರಾಯಣರು ಪ್ರತಿದಿನ ತೋಟದಲ್ಲಿ ಅರಳಿದ ಹೂಗಳ ಮಾಲೆಯನ್ನು ಕಟ್ಟಿ ಶ್ರೀರಂಗನಾಥನಿಗೆ ಸಮರ್ಪಿಸಿ ಅವನ ಪ್ರಸಾದವನ್ನು ಸ್ವೀಕರಿಸಿ ದೇವದೇವಿಗೂ ನೀಡುತ್ತಿದ್ದರು. ದೇವದೇವಿ ತೋಟದ ಪಾತಿಗಳನ್ನು ಶುಭ್ರಮಾಡುವುದು, ನೀರೆರೆಯುವುದು, ಹೂವುಗಳನ್ನು ಕಿತ್ತುತಂದು ಮಾಲೆಯನ್ನು ಪೋಣಿಸಿ ವಿಪ್ರನಾರಾಯಣರಿಗೆ ಕೊಡುವುದು – ಈ ವೃತ್ತಿಯಲ್ಲಿ ಹಲವು ದಿನಗಳು ಕಳೆದಳು. ವರ್ಷಋತುವಿನಲ್ಲಿ ಒಂದು ದಿನ ವಿಶೇಷವಾದ ಮಳೆ ಸುರಿಯುತ್ತಿರಲು ಅವಳು ನೀರಿನಲ್ಲಿ ತೊಯ್ದ ಬಟ್ಟೆಯಿಂದ ನಡುಗುತ್ತಾ ಪರ್ಣಶಾಲೆಯ ಹೊರಗಡೆ ಸಂಕಟಪಡುತ್ತಿರುವ ದೃಶ್ಯವನ್ನು ಕಂಡ ವಿಪ್ರನಾರಾಯಣರು ಆಕೆಯನ್ನು ಪರ್ಣಶಾಲೆ ಒಳಗೆ ಬರಲು ಹೇಳಿದರು. ಅವಳ ಒದ್ದೆಯಾದ ಸೀರೆಯನ್ನು ಕಂಡು ತಾವು ಧರಿಸಿದ್ದ ಉತ್ತರೀಯವನ್ನು ಆಕೆಗೆ ಕೊಟ್ಟರು. ದೇವದೇವಿ ಅವರ ಹತ್ತಿರಕ್ಕೆ ಬಂದು ವಿನಯದಿಂದ “ಸ್ವಾಮಿ, ತಮಗೆ ಚಳಿ ಆಗುತ್ತಿರಬಹುದು. ತಮ್ಮ ಪಾದಗಳನ್ನು ಒತ್ತುತ್ತೇನೆ” ಎಂಬುವುದಾಗಿ ಹೇಳಲು ವಿಪ್ರನಾರಾಯಣರು ಅದಕ್ಕೆ ಸಮ್ಮತಿಸಿದರು. ಆಕೆಯ ಸ್ಪರ್ಶ ಸುಖದಿಂದ ಅವಳ ಹಾವ ಭಾವ ವಿಲಾಸ ಚೇಷ್ಟಿತಗಳಿಗೆ ಮರುಳಾದರು. ಅವಳಲ್ಲಿ ಅನುರಾಗಗೊಂಡರು. ತಮ್ಮ ತಿರುಮಾಲೆ ಕೈಂಕರ್ಯವನ್ನು ಮರೆತು ಯಾವಾಗಲೂ ದೇವದೇವಿ ಜೊತೆ ಮನ್ಮಥ ಕ್ರೀಡೆಗಳಲ್ಲಿ ಆಸಕ್ತರಾದರು. ತನ್ನ ಪ್ರತಿಜ್ಞೆ ನೆರವೇರಿದ್ದನ್ನು ಕಂಡು ವಿಪ್ರನಾರಾಯಣರನ್ನು ತೊರೆದು ದೇವದೇವಿ ತನ್ನ ಸ್ವಂತ ಮನೆಗೆ ಹಿಂತಿರುಗಿದಳು.

ಅವಳ ವ್ಯಾಮೋಹಕ್ಕೆ ಸಿಲುಕಿದ ಆಳ್ವಾರರು ಅವಳ ಸಂಗಸುಖಕ್ಕೆ ಆಸೆ ಪಟ್ಟು, ಅವಳ ಮನೆಗೆ ಹೋಗಲು ಆಕೆ ಮನೆಯ ಕದವನ್ನು ತೆರೆಯಲಿಲ್ಲ. ದುಃಖಿತರಾದ ಅವರು ಆಕೆಯ ಮನೆಯ ಅಂಗಳದ ಜಗಲಿಯಮೇಲೆ ಅನ್ನ ಆಹಾರವಿಲ್ಲದೆ ಕಾಮಮೋಹಿತರಾಗಿ ವಿರಹಿಗಳಾಗಿ ರಾತ್ರಿ ನಿದ್ದೆ ಹೋದರು. ದೇವದೇವಿಯ ವ್ಯಾಮೋಹದಲ್ಲಿ ಸಿಲುಕಿ ನಿರ್ಧನರಾದ ವಿಪ್ರನಾರಾಯಣರ ಸ್ಥಿತಿಯನ್ನು ಕಂಡು ಲಕ್ಷ್ಮೀನಾರಾಯಣರು ತಮ್ಮ ಭಕ್ತನನ್ನು ಉದ್ಧಾರಮಾಡುವ ಸಂಕಲ್ಪ ಮಾಡಿದರು ಶ್ರೀರಂಗನಾಥನು ದೇವಾಲಯದ ತಿರುವಾರಾಧನ ಪಾತ್ರೆಯನ್ನು ತೆಗೆದುಕೊಂಡು ಬಂದು ದೇವದೇವಿಗೆ ವಿಪ್ರವಟುವಿನ ವೇಷದಲ್ಲಿ ಕಾಣಿಸಿಕೊಂಡು “ಈ ಚಿನ್ನದ ಬಟ್ಟಲನ್ನು ವಿಪ್ರನಾರಾಯಣರು ಕಳುಹಿಸಿದ್ದಾರೆ. ನಾನು ಸುಂದರವರ ( ಅಳಹಿಯ ಮಣವಾಳನ್ )” ಎಂಬುವುದಾಗಿ ಆ ಬಟ್ಟಲನ್ನು ಅವಳಿಗೆ ಕೊಟ್ಟು, ಕಣ್ಮರೆಯಾದನು. ಮಾರನೆಯದಿನ ದೇವಾಲಯದಲ್ಲಿ ಚಿನ್ನದ ಶುದ್ಧೋದಕ ಪಾತ್ರೆ ಕಳುವಾದ ವಾರ್ತೆ ಊರೆಲ್ಲಾ ಹಬ್ಬಿತು. ರಾಜನು ದೇವಸ್ಥಾನದ ಎಲ್ಲಾ ಸೇವಕರನ್ನು ಶಿಕ್ಷಿಸುವಂತೆ ಆಜ್ಞೆ ಮಾಡಿದನು. ದೇವದೇವಿಯ ಸೇವಕರು ದೇವಸ್ಥಾನದ ಪರಿಚಾರಕಾರನೊಬ್ಬನಲ್ಲಿ ದೇವದೇವಿಯ ಮನೆಯಲ್ಲಿ ಇರುವ ನೂತನ ಪಾತ್ರೆಯ ಸುಳಿವನ್ನು ನೀಡಿದಾಗ ರಾಜಭಟರು ದೇವದೇವಿಯ ಮನೆಗೆ ಬಂದು ವಿಚಾರಿಸಲು ಆ ಪಾತ್ರೆಯನ್ನು ವಿಪ್ರನಾರಾಯಣರ ಸೇವಕನು ಕೊಟ್ಟನೆಂದು ಹೇಳಿದಳು. ವಿಪ್ರನಾರಾಯಣರು ತಮ್ಮ ಬಳಿ ಅಳಹಿಯಮಣವಾಳನೆಂಬ ಯಾವ ಸೇವಕನೂ ಇಲ್ಲವೆಂದು ವಾದಿಸಿದರು. ಇದರ ಬಗ್ಗೆ ತೀರ್ಪು ಕೊಡುವ ಮುನ್ನ ದೇವದೇವಿ ಹಾಗೂ ವಿಪ್ರನಾರಾಯಣರನ್ನು ಬಂಧಿಸಿ ಸೆರೆಮನೆಯಲ್ಲಿಟ್ಟರು. ಅದೇದಿನ ರಾತ್ರಿ ಶ್ರೀರಂಗನಾಥನು ರಾಜನ ಸ್ವಪ್ನದಲ್ಲಿ ಕಾಣಿಸಿಕೊಂಡು ‘ಕಳುವಿಗೆ ಇವರಿಬ್ಬರೂ ಕಾರಣರಲ್ಲ. ವಿಪ್ರನಾರಾಯಣರ ಪ್ರಾರಬ್ಧ ಕರ್ಮಾನುಗುಣವಾಗಿ ಕಾರಾಗೃಹ ಶಿಕ್ಷೆಯಾಗಬೇಕಾಗಿತ್ತು, ಆ ಪಾತ್ರೆಯನ್ನು ಕೊಟ್ಟವನು

ಭಗವಂತನಾದ ನಾನೇ' ಎಂಬುವುದಾಗಿ ಹೇಳಿದನು. ಮೂರನೆಯದಿನ ಅವರಿಬ್ಬರನ್ನೂ ಸೆರೆಮನೆಯಿಂದ ಬಿಡುಗಡೆ ಮಾಡಲಾಯಿತು.

ವಿಪ್ರನಾರಾಯಣರು ಪಶ್ಚಾತ್ತಾಪಕ್ಕೀಡಾಗಿ ತಮ್ಮ ಅಸಹ್ಯಾಪಚಾರಕ್ಕಾಗಿ ಬಹಳ ಮನನೊಂದರು. ಪರಮಾತ್ಮನ ಕ್ಷಮೆಯನ್ನು ಬೇಡಿಕೊಂಡರು. ಪಾಪ ಪರಿಹಾರಕ್ಕಾಗಿ ಭಗವದ್ಭಕ್ತರ ಶ್ರೀಪಾದ ತೀರ್ಥವನ್ನು ಸ್ವೀಕರಿಸಿ ತಮ್ಮ ಹೆಸರನ್ನು ತೊಂಡರಡಿಪ್ಪೊಡಿ ( ಭಕ್ತರ ಪಾದದ ಧೂಳು ) ಅಥವ ಭಕ್ತರ ದಾಸ ( ಭಕ್ತಾಂಘ್ರೀರೇಣು ) ಎಂಬುವುದಾಗಿ ತಮ್ಮನ್ನು ಕರೆದುಕೊಂಡರು. ದೇವದೇವಿಗೂ ಪಶ್ಚಾತ್ತಾಪವಾಗಿ ತನ್ನ ಸರ್ವಸ್ವವನ್ನೂ ತೊರೆದು ಸನ್ಯಾಸಿನಿಯಾಗಿ ಶ್ರೀರಂಗನಾಥನ ಸೇವೆಯಲ್ಲಿ ತನ್ನ ಮಿಕ್ಕ ಜೀವಿತವನ್ನು ಕಳೆದಳು. ಇತ್ತ ತೊಂಡರಡಿಪ್ಪೊಡಿ ಆಳ್ವಾರರು ತಮ್ಮ ಆಯುಷ್ಯ ಕಾಲದಲ್ಲಿ ಶ್ರೀರಂಗನಾಥನ ತಿರುಮಾಲೆ ಕೈಂಕರ್ಯದಲ್ಲಿ ನಿರತರಾಗಿರಲು, ದೇವದೇವಿ ರಂಗನಾಥನ ಗುಡಿಯನ್ನು ಗುಡಿಸುವುದು, ರಂಗವಲ್ಲಿಗಳಿಂದ ಅಲಂಕರಿಸುವುದು ವಿಪ್ರನಾರಾಯಣರ ಹೂವನ್ನು ಮಾಲೆಕಟ್ಟುವುದು– ಈ ಕಾರ್ಯದಲ್ಲಿ ಮಗ್ನಳಾದಳು. ದೇವದೇವಿಯಲ್ಲಿ ನೆಟ್ಟ ಮನವು ಮತ್ತೆ ರಂಗನಾಥನಲ್ಲಿ ಒಡಮೂಡಿತು. ಹಿಂದಿನ ವೈರಾಗ್ಯವು ಮತ್ತೆ ಚಿಗುರಿತು. ರಂಗನಾಥದಲ್ಲಿ ಅನನ್ಯ ಭಕ್ತಿ ಅಂಕುರಿಸಿತು. ಶ್ರೀಮನ್ನಾರಾಯಣನ ಕೃಪಾಕಟಾಕ್ಷಗಳಿಂದ ತಾನು ತನ್ನ ಹಿಂದಿನ ವೃತ್ತಿಗೆ ಹಿಂತಿರುಗಿದ್ದನ್ನು ನೆನೆಯುತ್ತಾ ಭಗವಂತನ ಮಹಿಮೆಯನ್ನು ಕೊಂಡಾಡುತ್ತಾ ಅವನ ನಾಮ ಸಂಕೀರ್ತನೆಯಿಂದ ಭಕ್ತಿಪರವಶರಾಗಿ ತಿರುಮಾಲೆ ಎಂಬುವ 45 ಪಾಶುರಗಳ ದಿವ್ಯ ಪ್ರಬಂಧವನ್ನು ರಚಿಸಿದರು.

ತಿರುಮಾಲೈ ( ಸಿರಿಮಾಲೆ ) ಸೊಗಸಾದ, ಸುಂದರವಾದ ಕಾವ್ಯಮಯವಾದ ಭಕ್ತಿ ಗೀತೆಗಳು. ಜನರಿಗೆ ದಾರಿದೀಪದಂತಿವೆ. ಹಾಡಲು ಸವಿಯಾಗಿ ಮಾನವರಿಗೆ ಮುಕ್ತಿಯನ್ನು ಕೊಡಬಲ್ಲ ಸಂಜೀವಿನಿಯಾಗಿವೆ. ಕಥಾ ಸಂಕೀರ್ತನ ಕೇಶವ – ಎಂಬಂತೆ ಭಕ್ತನ ಹೃದಯ ಅಂತರಾಳದಿಂದ ವೈರಾಗ್ಯದಿಂದ ಭಕ್ತಿಯಿಂದ ಬಂದ ಈ ಸಿರಿಮಾಲೆ ನಿಜವಾಗಿಯೂ ಹಾಡುಗಳಲ್ಲಿ ಸಿರಿಮಾಲೆಯೇ. ಮೊದಲಿನ ಪದ್ಯದಲ್ಲಿ 'ಶ್ರೀರಂಗನಾಥನು ಸೃಷ್ಟಿ ಸ್ಥಿತಿಲಯ ಕಾರಣನು, ಅವನ ನಾಮವು ಸರ್ವ ಪಾಪ ಪರಿಹಾರ. ಯಮನ ಭಯ ಭೀತಿಯಿಲ್ಲ' ಎಂಬುವುದಾಗಿ ಹೇಳುತ್ತದೆ. ಎರಡನೆಯ ಪದ್ಯದಲ್ಲಿ

ಶ್ರೀರಂಗ ನಿತ್ಯವಾಸ, ರೂಪದಲಿ ಶೃಂಗಾರ
ವಿಲಾಸ।
ನಿನ್ನಂಗ ಸ್ವಪ್ರಕಾಶ ಹೋಲಿಕೆಯಲಿ
ಮರಕತಗಿರಿ ಸದೃಶ।
ಮಂಗಲ ವದನ ಧವಳಹಾಸ।
ಕಂಗಳು ಕಮಲ ಭಾಸ।
ರಂಗಾ ನೀ ಭಂಗತರದ ಆಶ್ರಿತನಿವಾಸ।
ಅಚ್ಯುತಾ ಅಮರ ಪುರವಾಸಾ
ಸಂಗ ಸುಖವನ್ನಿತ್ತ ಗೋಪಾಲಾ
ನಿನ್ನ ನಾಮರಸ ಮತ್ತೆ ಅನ್ಯ ಪಾನರಿಯೆ
ಶೃಂಗ ಮೋಕ್ಷ ವನ್ನಿತ್ತರೂ ನಾ ಒಲ್ಲೆ
ಒಲ್ಲೆಯಾ ಜೀಯಾ॥

– ಆಳ್ವಾರರು ಪರಮಪದವನ್ನು ಕೂಡ ಬೇಡವೆಂದು ಹೇಳಿದರು, ಕಾರಣ ಪರಮ ಪದದಲ್ಲಿ ಶ್ರೀರಂಗನಾಥನಂತಹ ದೈವ ಸಿಗಲಾರ ನಿತ್ಯವೂ ಕೈಂಕರ್ಯ ಪ್ರಾಪ್ತಿಯಾಗುವುದಿಲ್ಲ ಎಂಬ ಭಯ. ಮತ್ತೊಂದು ಜನ್ಮವೂ ಕೂಡ ತಮಗೆ ಬೇಡ ಕಾರಣ ಸಂಸಾರ ಸಾಗರದಲ್ಲಿ ಸಿಲುಕಿ ಬಾಲ್ಯ ಯೌವನ ಮುಪ್ಪು ಇವುಗಳಲ್ಲೇ ಆಯುಸ್ಸು ಕಳೆದು ಹೋಗುತ್ತದೆ. ಬೆಟ್ಟದಂತೆ ಪಾಪ ರಾಶಿಯನ್ನು ಹೊತ್ತ ಪಾಪಿಗಳೆಲ್ಲ ಗೋವಿಂದ ಎಂಬ ಸಂಕೀರ್ತನೆಯಿಂದ ಪರಮಪದವನ್ನು ಪಡೆದರು. ಮನಸ್ಸಿನಲ್ಲಿ ಒಂದು ಸಲವಾದರೂ ಕೂಡ ಹರಿಯ ಸ್ಮರಣೆಯನ್ನು ಮಾಡುವ ಭಕ್ತರ ವಿಷಯದಲ್ಲಿ ಮಿಗಿಲಾದ ದಯೆಯನ್ನು ತೋರುವ ಆಶ್ರಿತಪಾರಿಜಾತನಾದ ನಮ್ಮ ರಂಗನಾಥನನ್ನು ನೋಡಿಯೂ ಜನರು ಸಂಸಾರ ಚಕ್ರದಲ್ಲಿ ಸಿಕ್ಕಿ ಹಾಕಿಕೊಳ್ಳುವರಲ್ಲಾ ಎಂದು ತಿರುಮಾಲೆಯ ನಾಲ್ಕನೆಯ ಪಾಶುರದಲ್ಲಿ ಪರಿತಾಪ ಪಟ್ಟಿದ್ದಾರೆ.

"ವನಿತಾವಿತ್ತ ಬಂಧುಗಳ ಚಿಂತೆಯಲ್ಲಿ ದೇಹವು ಶಿಥಿಲವಾಗುತ್ತಿದ್ದರೂ ಕೂಡ ಅನಿತ್ಯವಾದ ದೇಹ ಪೋಷಣೆಯಲ್ಲೇ ಮನವುಳ್ಳ ಮಾನವನು ನಿತ್ಯನಾದ ಭಗವಂತನನ್ನು ಮರೆಹೋಗುವುದಿಲ್ಲ. ಮಣ್ಣಿನಲ್ಲಿ ಬಿದ್ದು ಹೋಗುವ ದೇಹಕ್ಕೆ ಪ್ರಾಧಾನ್ಯ ಕೊಡದೆ ಶ್ರೀರಂಗನಾಥನ ಕೈಂಕರ್ಯ ಮಾಡಬಾರದೆ! ಕ್ಷುದ್ರ ದೇವತೆಗಳ ಉಪಾಸನೆಬಿಟ್ಟು ರಾವಣನನ್ನು ಕೊಂದ ಅಮರ ರಾಮನನ್ನು ಸ್ತುತಿಸಿರಿ. ಅವನ ಪಾದಕಮಲಗಳಲ್ಲಿ ಶರಣಾಗತರಾಗಿ. ಭಕ್ತರು ತನ್ನ ಕಡೆ ಕಣ್ಣೆತ್ತಿ ನೋಡುವರೇ ತಾನು ಅವರ ರಕ್ಷಣೆಗೆ ಎಂದು ಹೋಗುವೇನೊ ಎಂಬುವ ದೀಕ್ಷೆಯನ್ನು ಹೊತ್ತ ಸ್ವಾಮಿಯ ಆಶ್ರಿತ ವಾತ್ಸಲ್ಯವನ್ನು ಅರಿಯಿರಿ ಮನುಜರೇ" ಎಂಬುವುದಾಗಿ ತಮ್ಮ ಮುಂದಿನ ಪಾಶುರಗಳಲ್ಲಿ ಕಳಕಳಿಯಿಂದ ಬೇಡುತ್ತಾರೆ. 'ಒಂದೇ ಬಾಣಪ್ರಯೋಗದಿಂದ ಸಮುದ್ರರಾಜನ ಅಟ್ಟಹಾಸವನ್ನು ಮೆಟ್ಟಿ, ಬೆಟ್ಟಗಳಿಂದ ಕಟ್ಟಿದ ಸೇತುವೆಯನ್ನು ದಾಟಿ ರಾಕ್ಷಸರಾಜನನ್ನು ಕೊಂದ ದೇವರು ನಿತ್ಯವೂ ನೆಲೆಸಿರುವ ನಾಡು ಈ ಶ್ರೀರಂಗ ನಗರವು, ಎಂದೂ ತಿಳಿಯದ ಮೂಢ ಮಾನವರೇ ಎಚ್ಚರ ಗೊಳ್ಳಿ. ಯಮ ಮುದ್ಗಲರ ಸಂವಾದಲ್ಲಿ ಹರಿಯ ನಾಮವನ್ನು ಕೇಳಿದ ಪಾಪಿಗಳು ಸ್ವರ್ಗ ಸೇರಿರಲು ಪಾಪಹರ ಪರಮಾತ್ಮ ನಂಬಿಯ ಊರು ಶ್ರೀರಂಗ' ಎನ್ನುವರು. ನರ ಜನ್ಮವೆತ್ತಿ ನಾಲಿಗೆಯಲಿ ನಂಬಿಯ ಹೆಸರು ಹೇಳಲೂ ಆಗದ ಮಾನವರ ಮೌಢ್ಯಕ್ಕೆ ಮರುಕಪಡುತ್ತಾರೆ ತೊಂಡರಡಿಪ್ಪೊಡಿಯಾಳ್ವಾರ್.

'ಪರಮ ಕಾರಣಿಕನಾದ ಕಮಲಪತಿಯು ತನ್ನ ಭಕ್ತರಿಗೆ ತನ್ನ ನಿಜಸ್ವರೂಪವನ್ನು ತೋರಿಸುತ್ತಾನೆ. ಅದಕ್ಕೆ ನಾನೇ ಸಾಕ್ಷಿ. ನಾನು ವಿಷಯಾಸಕ್ತನಾಗಿದ್ದ ಸಮಯದಲ್ಲೂ ನನ್ನ ಮೇಲೆ ಕೃಪೆ ತೋರಿ ನನ್ನ ಅಂತರಂಗವನ್ನು ಸೂರೆ ಮಾಡಿ ತನ್ನ ಕಡೆ ಕರೆದು ಕೊಂಡ ಕಾವೇಟರಂಗ ಶ್ರೀರಂಗನ ಊರು ಈ ಶ್ರೀರಂಗ ನಲಿವ ಅಲೆಗಳ, ಸಲಿಲ ಮೃದು ಮಧುರ ಕಾವೇರಿ ತರಂಗಗಳ ಮಧ್ಯದಲ್ಲಿ ಪವಡಿಸಿರುವ ಕಮಲ ಕಣ್ಗಳ ನನ್ನ ಸ್ವಾಮಿಯು ಕೆಂಪಾದತುಟಿಯುಳ್ಳವನು. ಕೃಷ್ಣನಾಗಿ ಹುಟ್ಟಿರುವನು. ಅವನ ಕಾಣಲಾರದ ಕಣ್ಣುಗಳಿಂದ ಕಣ್ಣೀರು ಬರುತ್ತದೆ ನಾನೇನು ಮಾಡಲಿ' ಎಂದು 18ನೆಯ ಪಾಶುರದಲ್ಲಿ ಹೇಳುತ್ತಾರೆ. ಶ್ರೀರಂಗನಾಥನು ಮಲಗಿರುವ ವೈಖರಿಯನ್ನು 19ನೆಯ ಪಾಶುರದಲ್ಲಿ ಹೀಗೆಂದು ಹಾಡಿದ್ದಾರೆ.

'ಕಿರೀಟವನ್ನು ಧರಿಸಿ, ಪಶ್ಚಿಮ ದಿಕ್ಕಿನಲ್ಲಿ ತಲೆಯನ್ನಿಟ್ಟು ಮಲಗಿ, ಪೂರ್ವದಿಕ್ಕಿಗೆ ತನ್ನ ಅಡಿದಾವರೆಗಳನ್ನು ಚಾಚಿ, ಉತ್ತರ ದಿಕ್ಕಿಗೆ ತನ್ನ ಬೆನ್ನಿನ ಸೌಂದರ್ಯವನ್ನು ತೊರಿಸುತ್ತ ದಕ್ಷಿಣ ದಿಕ್ಕಿನಲ್ಲಿರುವ ತನ್ನ ಭಕ್ತನಾದ ವಿಭೀಷಣನ ಲಂಕೆಯನ್ನು ನೋಡುತ್ತ, ಕಾಣುವವರ ಕಷ್ಟಗಳನ್ನು ಕರಗಿಸುವ ಕಡಲಿನ ಕಂದು ಬಣ್ಣವುಳ್ಳ ಶೇಷಶಯನ ಮಲಗಿರುವುದನ್ನು ಕಂಡು ನನ್ನ ತನು ಕರಗುತ್ತದೆ ನಾನೇನು ಮಾಡಲಿ' ಎಂಬುದಾಗಿ ಹಂಬಲಿಸುತ್ತಾರೆ.

23ನೆಯ ಪಾಶುರದಲ್ಲಿ 'ಗಂಗೆ ಬದರೀನಾರಾಯಣನ ಪಾದಸ್ಪರ್ಶದಿಂದ ಪುನೀತಳಾದಳ. ಕಾವೇರಿಯಾದರೋ ಸದಾಕಾಲ ಶ್ರೀರಂಗನಾಥನ ಸಾನ್ನಿಧ್ಯ ಸಾಮೀಪ್ಯಗಳಿಂದ ಪರಿಶುದಳಾಗಿದ್ದಾಳೆ. ಇಂತಹ ಪರಿಶುದ್ಧ ನೀರಿನಿಂದ ಆವೃತವಾದ ತೋಟಗಳುಳ್ಳ ಶ್ರೀರಂಗವು ರಮಣೀಯವಾದ ಆಶ್ರಿತ ಪಾರಿಜಾತನಾದ ಶ್ರೀರಂಗನಾಥನ ನಿತ್ಯವಾಸ ಸ್ಥಳವು. ಅವನ ಸ್ವರೂಪ ರೂಪ ವಿಭವ ಐಶ್ವರ್ಯಾದಿಗಳನ್ನು ಕಂಡಮೇಲೆ ಅವನನ್ನು ಹೇಗೆ ಮರೆತೇನು! ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡದೆ ಭ್ರಷ್ಟನಾದೆ. ಸಾಧನಾ

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನೆ | ಪ್ರಾ 8–00 | ಪಾ 8–30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | ,, | 40–00 |
| 3. | ಪುಳಿಯೋಗರೆ | ,, | 50–00 |
| 4. | ಪೊಂಗಲು | ,, | 55–00 |
| 5. | ಸಕ್ಕರಪೊಂಗಲ್ | ,, | 65–00 |
| 6. | ಶಾಕರ ಭಾತ್ | ,, | 85–00 |
| 7. | ಕೇಸರೀ ಭಾತ್ | ,, | 90–00 |
| 8. | ಸೀರ | ,, | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ಚತುಷ್ಪಯಗಳನ್ನು ಮರೆತೆ ಎನ್ನುವರು. 29 ನೆಯ ಪಾಶುರದಲ್ಲಿ ಪೂರ್ಣ ಶರಣಾಗತಿ ಯನ್ನು ಮಾಡಿದ್ದಾರೆ.

ಊರಿಲೇನ್ ಕಾಣಿಯಿಲ್ಲೈ ಉರವು
ಮತ್ತೊರುವರಿಲ್ಲೈ ।
ಪಾರಿಲ್ ನಿನ್ ಪಾದಮೂಲಂ
ಪತ್ರಿಲೇನ್ ಪರಮ ಮೂರ್ತೀ ।
ಕಾರೊಳಿವಣ್ಣನೇ ।
ಕಣ್ಣನೇ ಕದರುಹಿನ್ರೇನ್
ಆರುಳರ್ ಕಳೈ ಕಣಮ್ಮಾ ।
ಅರಂಗ ಮಾನಹರುಳಾನೇ ॥

– ಎನಗೆ ಊರಿಲ್ಲ, ಭೂಮಿಯಿಲ್ಲ ಸಂಬಂಧಿಗಳಿಲ್ಲ ಗೆಳೆಯರಿಲ್ಲ, ನಿನ್ನ ಚರಣ ಕಮಲವನ್ನು ಹಿಡಿದಿಲ್ಲ ಪರಮ ಮೂರ್ತಿ, ಕಾರ್ಮುಗಿಲ ಬಣ್ಣವುಳ್ಳ ವನೇ, ಕೃಷ್ಣನೇ! ಕೂಗಿಡುವ ಭಕ್ತರ ಮೊರೆಯನ್ನು ಕೇಳಲು ಶ್ರೀರಂಗದಲ್ಲಿ ಪವಡಿಸಿರುವ ಶ್ರೀರಂಗ ನಾಥನೇ! ನೀನಲ್ಲದೆ ಬೇರೆ ಯಾರೂ ನನಗೆ ರಕ್ಷಕರಿಲ್ಲ.

ಮುಂದಿನ ಪಾಶುರಗಳಲ್ಲಿ ದೇವದೇವಿಯಲ್ಲಿ ಅನುರಾಗಗೊಂಡಿದ್ದನ್ನು ನೆನಪಮಾಡಿಕೊಂಡು 'ಹೆಂಗಸರ ಒಲವಿಗೆ ಮರಳಾಗಿ ನಿನ್ನನ್ನು ಮರೆತೆ ಕೆಟ್ಟವನಾದ ನನ್ನನ್ನು ನೀನು ಉದ್ಧಾರ ಮಾಡಿರುವೆ, ನಾನು ನಿನ್ನ ಸೇವಕ. ಲೋಕಗಳನ್ನು ಆಳಿದಾಗ ಎಲ್ಲರ ತಲೆಯ ಮೇಲೆ ನಿನ್ನ ತ್ರಿವಿಕ್ರಮನು ಪಾದ ಸ್ಪರ್ಶವಾಗಿರುವಾಗ ಸರ್ವರಕ್ಷಕನು ನೀನಾಗಿರುವಾಗ ಬೇರೆಯವನನ್ನು ನಾನು ಸ್ಮರಿಸುವುದಿಲ್ಲ' ಎಂಬುವುದಾಗಿ ಹೇಳುತ್ತಾರೆ.

ಪ್ರಾಬೋಧಕೀ ಗೀತೆ ಎಂಬುವುದಾಗಿ ಪ್ರಸಿದ್ಧವಾಗಿರುವ ತಿರುಪ್ಪಳ್ಳಿಯೆಳುಚ್ಚಿ ಎಂಬುವ ಶ್ರೀರಂಗನ ಉದಯರಾಗವು ಬಹುಸುಂದರವಾದ ಸುಪ್ರಭಾತ. ಬಹುಶಃ ಮೊದಲನೆಯದಾಗಿ ಮಲಗಿರುವ ಶ್ರೀರಂಗನಾಥನನ್ನು ಎಬ್ಬಿಸುವ ಆ ಹತ್ತು ಸುಂದರ ಪದ್ಯಗಳು ಸುಪ್ರಭಾತದ ನಾಂದಿ ಇರಬಹುದು. ಮೊದಲನೆಯ ಪದ್ಯದಲ್ಲಿ ರಂಗನಾಥನನ್ನು ಕುರಿತು;

ರವಿಯು ಮೂಡಿದನು ಪೂರ್ವಾಚದಲ್ಲಿ, ಕಗ್ಗತ್ತಲು ತೊಲಗಿ ಬೆಳಗು ಮೂಡಿತು. ತಳಿರುಗಳೆಲ್ಲಾ ಜೇನುಗಿ ಮಧು ಒಸರಿಸಿದವು. ದೇವತೆಗಳೂ ಅರಸರೂ ಗುಂಪು ಗುಂಪಾಗಿ ಬಂದು ನಿನ್ನೆದುರು ನಿಂತಿರುವರು. ಅರಸರೊಡನೆ ಬಂದ ಹೆಣ್ಣು ಗಂಡು ಆನೆಗಳ ಶಬ್ದ ಭೇರಿಶಬ್ದದೊಡನೆ ಸೇರಿ ಸಾಗರ ಸಂಗಮದ ರವವನ್ನು ಹೋಲುತ್ತಿದೆ. ಶ್ರೀರಂಗನಾಥ; ಹಾಸಿಗೆಯಿಂದ ಎದ್ದೇಳಯ್ಯಾ, ಎನ್ನುವರು ಮುಂದಿನ ಹತ್ತು ಪಾಶುರಗಳಲ್ಲಿ ಬೆಳಗಿನ ಸೂರ್ಯ ಕಿರಣಗಳ ಸೊಗಸು, – ಬೆಳಗಿನ ಬಾಳೆ ಗಂಧದ ವನದಲ್ಲಿ ಪಿಕ ಶುಕಗಳ ಕುಕಿಲು. ಗೋಪಾಲರ ಮಧುರ ಕೂಜಿತರವ, ಅರಳಿ ನಿಂತ ಪುಷ್ಪಗಳ ಸಮೂಹ, ಶ್ರೀರಂಗನಾಥನ ಮುಂದೆ ಕಪಿಲೆ ಹಸು ಕನ್ನಡಿ ಕಾದುನಿಂತಿರುವ ಮನಮೋಹಕ ದೃಶ್ಯಗಳ ವಿವರಣೆ. ತುಂಬುರ ನಾರದರು ಮುನಿಗಳು ಭಕ್ತರು ಹಾಡುವಾಗ ಮೊಳಗುವ ಮಂಗಳವಾದ್ಯಗಳ ಸುಮಧುರವಾದ ಸಂಗೀತ ಸ್ವಾಮಿಯ ದರ್ಶನಕ್ಕಾಗಿ ಹಾತೊರೆಯುತ್ತಿರುವ ಕಿನ್ನರ ಗಂಧರ್ವ ಯಕ್ಷ, ದೇವತೆಗಳ ಗುಂಪಿನ ದೃಶ್ಯ– ಇವುಗಳನ್ನೆಲ್ಲಾ ವಿವರಿಸುತ್ತಾ ಕೊನೆಯ ಹತ್ತನೆಯ ಪಾಶುರದಲ್ಲಿ 'ಸೊಗಸಾದ ಪರಿಮಳವನ್ನು ಬೀರುವ ಕಮಲಗಳ ಅರಳಿ ನಿಂತಿವೆ, ವಾಯುವು ಕಡಲಿನೊಡನೆ ಸೇರಿ ವಿಜೃಂಭಿಸುತ್ತಿದ್ದಾನೆ. ಸೂರ್ಯನ ಬೆಳಕನ್ನು ಕಾಣುತ್ತಲೇ ಹೆಂಗಸರು ಸ್ನಾನಗೈದು ತಲೆ ಕೂದಲನ್ನು ಹಿಂಡಿ ಕಟ್ಟಿ, ವಸ್ತ್ರಗಳನ್ನುಟ್ಟು ನಿನ್ನ ದರ್ಶನಕ್ಕಾಗಿ ನದಿಯ ದಂಡೆಯನ್ನೇರಿ ಬರುತ್ತಿದ್ದಾರೆ. ಕಾವೇರಿಯಿಂದ ಸುತ್ತಲ್ಪಟ್ಟ ಸೊಬಗಿನ ಶ್ರೀರಂಗಾ! ನಿನಗೆ ಪ್ರಿಯವಾದ ತುಲಸೀ ಮಾಲೆಯನ್ನು ಕಟ್ಟಿ ತಂದಿರುವೆ ಸ್ವಾಮಿ, ತೊಂಡರಡಿಪ್ಪೊಡಿ ಎನ್ನುವ ನಾಮನಾಂಕಿತನಾದ ಈ ದಾಸನು ನಿನ್ನ ರಕ್ಷಣೆಗೆ ಯೋಗ್ಯನೆಂದು ಭಾವಿಸಿ ದಯೆಗೈದು ಹಾಸಿಗೆಯಿಂದ ಎದ್ದೇಳಯ್ಯಾ, – ಎಂಬುವುದಾಗಿ ಬೇಡುತ್ತಾರೆ.

ವಿಪ್ರನಾರಾಯಣರ ಈ ಸುಪ್ರಭಾತದ ಸಿರಿನುಡಿಗಳು ಬಹು ಸುಂದರವಾಗಿವೆ. ಭಾವುಕರನ್ನು ತನ್ಮಯರನ್ನಾಗಿ ಮಾಡಬಲ್ಲ ಪಾಶುರಗಳವು. ಅವುಗಳನ್ನು ನಾವು ಹಾಡುತ್ತಾ ಹಾಡುತ್ತಾ ದೈವಿಕವಾದ ದಿವ್ಯರಸಾನುಭವ ಉಂಟಾಗುತ್ತೆ. ಆನಂದದ ಬುಗ್ಗೆ ನಮ್ಮಲ್ಲಿ ತಲೆದೋರಿ ಭಕ್ತಿಯ ಅನುಭವ ನಮಗೆ ಉಂಟಾಗುತ್ತೆ, ಸಕಲ ವೇದಾರ್ಥ ಸಂಯುತವಾದ, ಮೃದುವಾದ ಲಕ್ಷಣ ಗುಣವುಳ್ಳ ವಾಕ್ ಸಂಪತ್ತಿನಿಂದ ಸುಭಗವಾದ ಈ ತಿರುಪ್ಪಳ್ಳಿಯೆಳುಚ್ಚಿ ನಿಜವಾಗಲೂ ಪ್ರಪನ್ನರಿಗೆ ಅಮೃತ. ರಂಗನಾಥನನ್ನು ಪರದೈವವೆಂದು ಭಾವಿಸಿ ಶ್ರೀರಂಗವೇ ಪರಮಪದವೆಂದು ಭಾವಿಸಿ ಅಲ್ಲಿರುವ ಜನರೆಲ್ಲರೂ ಪ್ರಪನ್ನರು ಭಕ್ತರು ಎಂದು ಗೌರವದಿಂದ ಅವರ ಪಾದಧೂಳಿಯನ್ನು ಸೇವಿಸಿ ಕೃತಕೃತ್ಯರಾದ ಶ್ರೀವಿಪ್ರನಾರಾಯಣರು ಆಳ್ವಾರುಗಳಲ್ಲಿ ಚಿರಸ್ಮರಣೀಯರು. ★

**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

# ಚೋಳದೇಶದ ವಿಷ್ಣುಕ್ಷೇತ್ರಗಳು

ಶ್ರೀವೈಷ್ಣವ ಸಿದ್ಧಾಂತಗಳ ಅನುಷ್ಠಾನದಲ್ಲಿ ಶ್ರೀವಿಷ್ಣುವು ನೆಲೆಸಿರುವ ಕ್ಷೇತ್ರಗಳೆಂದು ನಂಬಿರುವ ದಿವ್ಯದೇಶಗಳ ಸಂದರ್ಶನವೂ ಒಂದು ಅಗತ್ಯ ಕರ್ತವ್ಯವಾಗಿದೆ. ಹಿಂದಿನ ಕಾಲದಲ್ಲಿ ಇಂತಹ ದಿವ್ಯ ದೇಶಗಳ ದರ್ಶನವನ್ನು ಒಂದು ಪವಿತ್ರ ಕಾರ್ಯ, ತಮ್ಮ ಜೀವನದ ಮುಖ್ಯ ಗುರಿ ಎಂದು ಜನರು ನಂಬಿದ್ದರು. ಇಂದಿಗೂ ಈ ನಂಬಿಕೆಯನ್ನು ಅನೇಕರು ಪಾಲಿಸಿಕೊಂಡು ಬಂದಿದ್ದಾರೆ. ಆದರೆ ಈ ದಿವ್ಯದೇಶಗಳು ಯಾವುವು ಎಲ್ಲಿವೆ ಎಂಬುದರ ಕಿರುಪರಿಚಯವೇ ಈ ಪ್ರಬಂಧ.

ಶ್ರೀವೈಷ್ಣವ ದಿವ್ಯ ದೇಶ (ಕ್ಷೇತ್ರ)ಗಳು 108. ಇವು ಚೋಳ, ಪಾಂಡ್ಯ, ಚೇರ, ಮಧ್ಯ, ತೊಂಡೈ ಮಂಡಲಗಳು ಹಾಗೂ ಉತ್ತರ ದೇಶಗಳಲ್ಲಿ ನೆಲೆಸಿವೆ. ಇವುಗಳಲ್ಲಿ ಹೆಚ್ಚು ಭಾಗ ದ್ರವಿಡ ಭಾಷೆ ಮಾತನಾಡುವ ಮೊದಲ ಐದು ಮಂಡಲಗಳಲ್ಲಿ ಹೆಚ್ಚಾಗಿರುವುದು ಗಮನಾರ್ಹ.

ಚೋಳಮಂಡಲ ಪ್ರಾಂತ್ಯದಲ್ಲಿ ಇಂತಹ 40 ಕ್ಷೇತ್ರಗಳಿವೆ. ಇವು ಶ್ರೀವೈಷ್ಣವರ ದೃಷ್ಟಿಯಿಂದ ಮುಖ್ಯವಾದವುಗಳೂ ಹೌದು. ಇದಕ್ಕೆ ಮುಖ್ಯ ಕಾರಣ–ಎಲ್ಲ ಆಳ್ವಾರುಗಳೂ, ಆಚಾರ್ಯರುಗಳೂ ತಮ್ಮ ಕಾರ್ಯಕ್ಷೇತ್ರವನ್ನು ಹಮ್ಮಿಕೊಂಡ ಸ್ಥಳವಿದೇ! ಚೋಳರ ಶೈವ ಪ್ರಚಾರ, ದ್ವೇಷ, ಅಸಹನೆಗಳನ್ನು ಎದುರಿಸಿ, ಶ್ರೀವೈಷ್ಣವ ಸಿದ್ಧಾಂತಗಳ ಪ್ರಚಾರ, ಮುಂದುವರಿದ ಪ್ರದೇಶವಿದು. ಇವೆಲ್ಲಕ್ಕಿಂತ ಹೆಚ್ಚಾಗಿ ಕಾವೇರಿ ನದಿಯು ಸಮುದ್ರವನ್ನು ಸೇರುವ ಪ್ರದೇಶವಿದು – ಕಾವೇರಿಯ ಮುಖಜಭೂಮಿ ಇರುವ ಪ್ರದೇಶ. ವ್ಯವಸಾಯದ ದೃಷ್ಟಿಯಿಂದ ಸಂಪನ್ನವಾಗಿ ಇರುವ ಪ್ರದೇಶ. ಆದುದರಿಂದ ಮತೀಯ ಘರ್ಷಣೆಗಳಿದ್ದರೂ ಮತಗಳು ಬೆಳೆಯಲು ಇಲ್ಲಿನ ಪರಿಸರ ಅನುವು ಮಾಡಿಕೊಟ್ಟಿತು.

ಒಮ್ಮೊಮ್ಮೆ ಇದನ್ನು 'ಕಾವೇರಿ ಮಂಡಲ' ವೆಂದೂ ಕರೆಯುವುದುಂಟು. ಕಾವೇರಿ ಮುಖಜ ಭೂಮಿ ಇರುವುದೇ ಇದಕ್ಕೆ ಮುಖ್ಯ ಕಾರಣ. ಚೋಳ ಚಕ್ರಾಧಿಪತ್ಯದ ಕೇಂದ್ರ ಬಿಂದುವಾದ ಈ ಪ್ರದೇಶದ ಕ್ಷೇತ್ರಗಳನ್ನು ಎಲ್ಲ ಆಳ್ವಾರುಗಳು ಸಂದರ್ಶಿಸಿ, ಅಲ್ಲಿನ ದೇವರುಗಳ ಬಗ್ಗೆ ಹಾಡಿದ್ದಾರೆ. ಇವನ್ನೇ ಮಂಗಳಾಶಾಸನಗಳು ಎಂದು ಕರೆಯುವುದು. ಈ ಎಲ್ಲರುಗಳ ಜೀವನದ ಬಗ್ಗೆ ಸಾಕಷ್ಟು ಘಟನೆಗಳು, ದಂತ ಕಥೆಗಳೂ ಇವೆ. ಆದರೆ ಈ ವಲಯದಲ್ಲಿ ತಿರುಮಂಗೈ ಆಳ್ವಾರ್ ಹಾಗೂ ಶ್ರೀರಾಮಾನುಜರ ಪ್ರಭಾವವೇ ಹೆಚ್ಚಾದುದು.

ಇಲ್ಲಿನ ಕ್ಷೇತ್ರಗಳು ಕೆಲವೊಂದು ಕೇಂದ್ರ ಬಿಂದುಗಳ ಸುತ್ತಲೂ ಹರಡಿವೆ. ಆ ಕೇಂದ್ರ ಬಿಂದುವಿನಲ್ಲಿ ಇದ್ದು, ಅದಕ್ಕೆ ಹೊಂದಿ ಕೊಂಡಿರುವ ದಿವ್ಯದೇಶಗಳನ್ನು ಸಂದರ್ಶಿಸಿ, ಮುಂದಿನ ಕೇಂದ್ರ ಬಿಂದುವಿಗೆ ಹೋಗುವುದು ಒಳ್ಳೆಯದು. ಇದು ಪ್ರವಾಸಿಗರಿಗೆ ನೀಡುವ ಕಿವಿ ಮಾತು. ಹಾಗೆ ಹೋಗುವವರು ಒಂದಷ್ಟು ಬ್ರೆಡ್, ಅಥವಾ ಮನೆಯಲ್ಲಿ ಸಿದ್ಧಗೊಳಿಸಿ, ತೆಗೆದುಕೊಂಡುಹೋಗುವ ತಿಂಡಿಗಳನ್ನು ಜೊತೆಯಲ್ಲಿ ಇಟ್ಟು ಕೊಂಡಿರುವುದು ಸದಾ ಒಳ್ಳೆಯದು.

ಮೇಲೆ ತಿಳಿಸಿದ ಕೇಂದ್ರ ಬಿಂದುಗಳು ಯಾವುವೆಂದರೆ ಶ್ರೀರಂಗಂ, ತಂಜಾವೂರು, ಕುಂಭಕೋಣ, ಮಾಯಾವರಂ, ನಾಗಪಟ್ಟಣ, ಶೀರ್ಕಾಳಿ, ಚಿದಂಬರಂ, ತಿರುವಾರೂರು ಮತ್ತು ತಿರುವಿಡಮರುದೂರ್.

## ಶ್ರೀರಂಗಂ ಸುತ್ತಮುತ್ತ :

ಶ್ರೀರಂಗವು ಶ್ರೀವೈಷ್ಣವ ಸಿದ್ಧಾಂತದ ಕೇಂದ್ರ ಬಿಂದು. ಅನೇಕ ಆಚಾರ್ಯರುಗಳು, ಆಳ್ವಾರುಗಳು ನೆಲೆಸಿದ ಪುಣ್ಯಕ್ಷೇತ್ರ. ಇಂದಿಗೂ ಈ ಕ್ಷೇತ್ರದಲ್ಲಿ ಆ ಪ್ರಾಚೀನತೆ ನೆಲೆಸಿದೆ. ಇದು ಕಾವೇರಿ ನದಿಯಿಂದ ಆವೃತವಾದ ಒಂದು ದ್ವೀಪ. ಇಂತಹ ದ್ವೀಪಗಳಲ್ಲಿ ಇದು ಮೂರನೆಯದು. (ಮೊದಲೆರಡು ಕರ್ನಾಟಕದಲ್ಲಿದೆ – ಒಂದನೆಯದು ಶ್ರೀರಂಗಪಟ್ಟಣ–ಆದಿರಂಗ; ಎರಡನೆಯದು – ಶಿವನ ಸಮುದ್ರ – ಮಧ್ಯರಂಗ) ಇದನ್ನು ಅಂತ್ಯರಂಗ ಹಾಗೂ ಪೂರ್ವರಂಗ ಎಂದೂ ಕರೆಯುತ್ತಾರೆ.

ಶ್ರೀರಂಗ ದೇವಾಲಯವು ಭಾರತದಲ್ಲೇ ಅತ್ಯಂತ ವಿಶಾಲವಾದ ದೇವಾಲಯ. 108 ದಿವ್ಯ ಕ್ಷೇತ್ರಗಳಲ್ಲಿ ಪ್ರಧಾನವಾದುದು. ಇದು ಏಳು ಪ್ರಾಕಾರಗಳಲ್ಲಿ 15 ಗೋಪುರಗಳಿಂದ ದೇದೀಪ್ಯಮಾನ ಮಾನವಾಗಿರುವ ನಗರವಾಗಿದೆ. ಪೂರ್ತಿ ಶ್ರೀರಂಗವೇ ಈ ಏಳು ಪ್ರಾಕಾರಗಳಲ್ಲಿದೆ.

ಈ ದೇವಾಲಯದಲ್ಲಿ ಎಲ್ಲ ರೀತಿಯ ಉತ್ಸವಗಳೂ, ಎಲ್ಲ ತೆರನಾದ ತಿರುನಕ್ಷತ್ರ ಉತ್ಸವಗಳೂ ಜರುಗುತ್ತವೆ. ಇವೆಲ್ಲವೂ ಪರಂಪರೆಯ ಮೆರುಗನ್ನು ಹೊಂದಿದ್ದು ಬಹಳ ಅದ್ದೂರಿಯಾಗಿ, ವೈಭವದಿಂದ ಪ್ರಾಚೀನತಮ ಒಡವೆಗಳಿಂದ ಕೂಡಿ, ಖ್ಯಾತಿ ಪಡೆದಿದೆ. ಒಡವೆಗಳು ಅಪರಿಮಿತವಾಗಿವೆ.

ಶಯನರೂಪದಲ್ಲಿರುವ ಶ್ರೀರಂಗನಾಥನು ನೋಡಲು ಬಹುಸುಂದರ. ಇದು ಮುಂಚೆ ಬ್ರಹ್ಮನಿಂದ ಸತ್ಯ ಲೋಕದಲ್ಲಿ ಪೂಜಿಸಲ್ಪಡುತ್ತಿದ್ದು, ಇಕ್ಷ್ವಾಕು ಮಹಾರಾಜನು ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಪಡೆದನು. ಆತನ ವಂಶಜನಾದ ಶ್ರೀರಾಮನು ತನ್ನ ಪಟ್ಟಾಭಿಷೇಕದ ನಂತರ, ವಿಭೀಷಣನು ಲಂಕೆಗೆ ಹಿಂತಿರುಗಲು ದುಃಖ ಪಡುತ್ತಿರುವಾಗ, ತನ್ನ ಪ್ರತಿನಿಧಿಯಾಗಿ ಈ ಸುಂದರ ಪೂಜಾ ವಿಗ್ರಹವನ್ನು ವಿಭೀಷಣನಿಗೆ ನೀಡಿದನು. ಆದರೆ ಲಂಕೆಗೆ ತೆಗೆದುಕೊಂಡು ಹೋಗುವಾಗ ಈ ಉಭಯ ಕಾವೇರಿಗಳ ಮಧ್ಯದಲ್ಲಿ ಚಂದ್ರ ಪುಷ್ಕರಿಣೀ ತೀರದಲ್ಲಿ ಪ್ರಣವಾಕಾರ ವಿಮಾನದೊಂದಿಗೆ ಎತ್ತುವುದಕ್ಕೆ ಅಸಾಧ್ಯವಾದಂತಹ ರೀತಿಯಲ್ಲಿ ಶ್ರೀರಂಗನಾಥನು ಪವಡಿಸಲು, ಬೇರೆ ದಾರಿಯಿಲ್ಲದೆ ಇಲ್ಲಿಯೆ ಆ ಪರಮಮಂಗಳ ಮೂರ್ತಿಯನ್ನು ಬಿಟ್ಟು, ವರ್ಷಕ್ಕೊಂದುಸಲ ಬಂದು ಪೂಜೆ ಮಾಡಿಕೊಂಡು ಹೋಗುವುದಾಗಿ ಹೇಳಿ ಹೊರಟು ಹೋದನು. ಇಂದಿಗೂ ವರ್ಷಕ್ಕೊಂದು ಸಲ ಆತ ಬಂದು ಪೂಜೆ ಮಾಡಿಕೊಂಡು ಹೋಗುವನೆಂಬ ನಂಬಿಕೆ ಪ್ರಚಲಿತವಾಗಿದೆ.

ಈ ದೇವಾಲಯದ ಗರ್ಭಗೃಹದಲ್ಲಿ ಪೆರಿಯ ಪೆರುಮಾಳ್, ನಂಪೆರುಮಾಳ್, ತಿರುವರಂಗ ಮಾಳಿಗೈಯಾರ್‌ರವರು ನಿವಸಿಸಿದ್ದಾರೆ ವಿಮಾನ ಪ್ರದಕ್ಷಿಣ ಪ್ರಾಕಾರದ ಗೋಡೆಗಳ ಮೇಲೆ 108 ದಿವ್ಯ ಕ್ಷೇತ್ರ ( ತಿರುಪತಿ )ಗಳ ದೇವರುಗಳನ್ನು ಚಿತ್ರಗಳಲ್ಲಿ ಬಿಡಿಸಿದ್ದಾರೆ. ಇದರ ಮುಂದಿನ ಏಳು ಪ್ರಾಕಾರಗಳಲ್ಲಿಯೂ–ಈ ನಗರದಲ್ಲಿ ಬೇರೆ ಬೇರೆ ಆಳ್ವಾರುಗಳ ಸನ್ನಿಧಿಗಳು, ವಿವಿಧ ಕೈಂಕರ್ಯ ಕಾರರ ತಿರುಮಾಳಿಗೈಗಳು ಇವೆ. ಏಳನೆಯ

ರಘುಸುತ

ಪ್ರಾಕಾರದ ಕೊನೆಯಲ್ಲಿನ 15 ನೆಯ ಗೋಪುರವನ್ನು ರಾಯಗೋಪುರ ಎನ್ನುವರು. ಇದನ್ನು ತಿರುಮಲ ನಾಯಕನು ಕಟ್ಟಿಸಿದನು.

ಶ್ರೀರಂಗದ ಸುತ್ತಮುತ್ತ ಆರು ದಿವ್ಯಕ್ಷೇತ್ರಗಳಿವೆ. ಅವು ಯಾವುವೆಂದರೆ – ಉರೈಯೂರ್, ಅನ್ಬಿಲ್, ಕರಂಬನೂರ್, ತಿರುಪ್ಪೇರ್ ನಗರ್, ತಿರುವೆಳ್ಳರೈ ಮತ್ತು ಗುಣಶೀಖರ.

ಶ್ರೀರಂಗಕ್ಕೆ ದಕ್ಷಿಣದಲ್ಲಿ ಮೂರು ಮೈಲಿ ದೂರದಲ್ಲಿ ಉರೈಯೂರ್ ಇದೆ. ಇದನ್ನು ನಿಚುಳಾಪುರಿ ಎಂದೂ ಕರೆಯುತ್ತಾರೆ. ತಿರುಪ್ಪಾಣಿ ಆಳ್ವಾರರು ಹುಟ್ಟಿದ ಸ್ಥಳವಿದು. ಧರ್ಮವರ್ಮ ರಾಜನ ಮಗಳಾದ, ಲಕ್ಷ್ಮಿ ಅವತಾರ ರೂಪಿಯಾದ, ವಾಸಲಕ್ಷ್ಮಿಯನ್ನು ವಿವಾಹ ಮಾಡಿಕೊಂಡ ಸ್ಥಳವಿದು. ಮೀನ ಮಾಸದಲ್ಲಿ ನಡೆಯುವ ಆದಿ ಬ್ರಹ್ಮೋತ್ಸವದ ಮೂರನೆಯ ದಿನ ಉರೈಯೂರಿಗೆ ಶ್ರೀರಂಗನಾಥರು ದಯಮಾಡಿಸಿ, ಉರೈಯೂರು ನಾಚ್ಚಾರನೊಂದಿಗೆ ಆಸೀನರಾಗಿ ಭಕ್ತರನ್ನು ಅನುಗ್ರಹಿಸುವರು. ಶ್ರೀರಂಗದಲ್ಲಿನ ನಾಚ್ಚಿಯಾರಿಗೆ ನಡೆಯುವ ಎಲ್ಲ ಉತ್ಸವಗಳು ಇಲ್ಲಿಯ ನಾಚ್ಚಿಯಾರಿಗೂ ನಡೆಯುವುದು. ಇಲ್ಲಿ ಅಳಹಿಯ ಮಣವಾಳ ಪೆರುಮಾಳ್ ಇದ್ದಾರೆ.

ಶ್ರೀರಂಗಕ್ಕೆ ಈಶಾನ್ಯದಲ್ಲಿ 13 ಮೈಲಿಗಳ ದೂರದಲ್ಲಿ ಅನ್ಬಿಲ್ ಕ್ಷೇತ್ರವಿದೆ. ಭುಜಂಗಶಯನನಾದ ಇಲ್ಲಿಯ ದೇವರು–ತಿರುವಡಿ ವಳಹಿಯನಂಬಿ ಮತ್ತು ಅಳಹಿಯವಲ್ಲಿ ನಾಚ್ಚಾರ್. ಇಲ್ಲಿನದು ತಾರಕ ವಿಮಾನ ಮತ್ತು ಮಂಡೂಕ ಪುಷ್ಕರಿಣಿ. ತಿರುಮಳಿಶೈ ಆಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಇಲ್ಲಿಂದ ಎರಡು ಮೈಲಿ ದಕ್ಷಿಣಕ್ಕೆ ಕಾಲು ದಾರಿಯಲ್ಲಿ ಹೋದರೆ ತಿರುಪ್ಪೇರ್ ನಗರ್ ಎನ್ನುವ ದಿವ್ಯಕ್ಷೇತ್ರವಿದೆ. ಇಲ್ಲದಿದ್ದಲ್ಲಿ ಶ್ರೀರಂಗದಿಂದ ಆಗ್ನೇಯಕ್ಕೆ 1' ಮೈಲಿದೂರ ಪ್ರಯಾಣ ಮಾಡಿದರೆ ಈ ಕ್ಷೇತ್ರ ಸಿಗುವುದು. ಇಲ್ಲಿಗೆ ಯಾವ ಕಡೆಯಿಂದ ಹೋದರೂ ನಡೆದೇ ಹೋಗಬೇಕು. ಇಲ್ಲಿಯ ದೇವರು–ಅಪ್ಪಕ್ಕೊಡುತ್ತಾನ್ ಪೆರುಮಾಳ್ ಮತ್ತು ಕಮಲವಲ್ಲಿ ತಾಯಾರ್. ಇಲ್ಲಿರುವುದು ಇಂದ್ರ ವಿಮಾನ, ಇಂದ್ರತೀರ್ಥ ಮತ್ತು ಇಂದ್ರಗಿರಿ. ತಿರುಮಳಿಶೈ, ನಮ್ಮಾಳ್ವಾರ್, ಪೆರಿಯಾಳ್ವಾರ್, ತಿರುಮಂಗೈ ಆಳ್ವಾರರುಗಳು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ. ಈ ಕ್ಷೇತ್ರವನ್ನು ಕೋವಿಲಡಿ ಎಂದೂ ಕರೆಯುತ್ತಾರೆ. ಈ ಕ್ಷೇತ್ರಕ್ಕೆ ಹೋಗುವುದು ಬಹಳ ಕಷ್ಟ. ನದೀಬಾಹುಗಳನ್ನು ದೋಣಿಗಳ ಮುಖಾಂತರ ದಾಟಿಹೋಗಬೇಕಾಗುತ್ತದೆ.

ಶ್ರೀರಂಗದಿಂದ ಉತ್ತರಕ್ಕೆ ಮೂರು ಮೈಲಿ ದೂರದಲ್ಲಿ ಕರಂಬನೂರ್ ಎನ್ನುವ ದಿವ್ಯಕ್ಷೇತ್ರವಿದೆ. ಇದನ್ನು ಕಡಂಬನೂರ್ ಅಥವಾ ಉತ್ತಮರ್ ಸನ್ನಿಧಿ ಎಂದೂ ಕರೆಯುತ್ತಾರೆ. ಉದ್ಯೋಗ ವಿಮಾನವಿರುವ ಇಲ್ಲಿನ ದೇವಾಲಯದಲ್ಲಿ ಪುರುಷೋತ್ತಮ ಹಾಗೂ ಪೂರ್ವಾದೇವಿ ನಾಚ್ಚಿಯಾರುಗಳಿದ್ದಾರೆ. ಕದಂಬ ತೀರ್ಥ ಹಾಗೂ ಕದಳೀ ಪುಣ್ಯ ವೃಕ್ಷವಿದೆ. ಪ್ರಾಚೀನತಮ ಬಾಳೆಗಿಡವಿಲ್ಲಿದೆ. ತಿರುಮಂಗೈ ಆಳ್ವಾರ್ ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಇಲ್ಲಿಂದ ಏಳು ಮೈಲಿ ಉತ್ತರಕ್ಕೆ ತಿರುವೆಳ್ಳರೈ ಎನ್ನುವ ಕ್ಷೇತ್ರವಿದೆ. ಇದನ್ನು ಶ್ವೇತಗಿರಿ ಎಂದೂ ಕರೆಯುತ್ತಾರೆ. ಉಯ್ಯಕೊಂಡಾರು ಅವತರಿಸಿದ ಸ್ಥಳವಿದು. ಶಿಬಿ ಚಕ್ರವರ್ತಿಗೆ ಮೊದಲು ವರಾಹರೂಪದಲ್ಲಿ, ನಂತರ ಪುಂಡರೀಕಾಕ್ಷನಾಗಿ ದರ್ಶನ ನೀಡಿದ ಸ್ಥಳವಿದೆಂದು ಪ್ರತೀತಿ. ವಿಮಲಾಕೃತಿ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ಪುಂಡರೀಕಾಕ್ಷ, ಪಂಕಜವಲ್ಲಿ ನಾಂಚಾರ್, ಚಂಪಕವಲ್ಲಿ ತಾಯಾರು ರವರುಗಳು ಭಕ್ತರುಗಳಿಗೆ ದರ್ಶನವನ್ನೀಯುತ್ತಿದ್ದಾರೆ. ಇಲ್ಲಿ ಕುಶಲ ತೀರ್ಥ, ಚಕ್ರತೀರ್ಥ, ದಿವ್ಯಪುಷ್ಕರಿಣಿ, ಪುಷ್ಕಲ ತೀರ್ಥ, ಪದ್ಮ ತೀರ್ಥ, ಗಂಧ ಪುಷ್ಕರಿಣಿ, ಕ್ಷೀರ ಪುಷ್ಕರಿಣಿ ವರಾಹತೀರ್ಥ–ಎನ್ನುವ ತೀರ್ಥಗಳಿವೆ. ಇಲ್ಲಿ ಪೆರಿಯಾಳ್ವಾರ್ ಮತ್ತು ತಿರುಮಂಗೈ ಆಳ್ವಾರ್ ರವರುಗಳು ಮಂಗಳಾಶಾಸನ ಮಾಡಿದ್ದಾರೆ.

## ತಂಜಾವೂರು ಸುತ್ತಮುತ್ತ :

ತಂಜಾವೂರು ಒಂದು ಐತಿಹಾಸಿಕ, ಪ್ರೇಕ್ಷಣೀಯ ಸ್ಥಳ. ಸುಂದರ ಗೋಪುರದಿಂದ ಕೂಡಿದ

ಇಲ್ಲಿನ ಬೃಹದೀಶ್ವರ ದೇವಾಲಯವು ಅತ್ಯಂತ ಆಕರ್ಷಣೀಯ ಸ್ಥಳ.

ಇಲ್ಲಿನ ರೈಲ್ವೆಸ್ಟೇಷನ್ನಿನಿಂದ ಉತ್ತರದಲ್ಲಿ 2½ ಮೈಲಿ ದೂರದಲ್ಲಿ ತಂಜಮಾಮಣಿಕ್ಕೋಯಿಲ್ ಎನ್ನುವ ಕ್ಷೇತ್ರವಿದೆ. ಸೌಂದರ್ಯ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ನೀಲಮೇಘ ಪೆರುಮಾಳ್ ಮತ್ತು ಶೆಂಗಮಲವಲ್ಲಿ ತಾಯಾರು ಗಳಿದ್ದಾರೆ. ಇಲ್ಲಿ ಕನ್ನಿಕಾ ಪುಷ್ಕರಿಣಿ ಮತ್ತು ಅಮೃತ ತೀರ್ಥಗಳಿವೆ. ಪೂದತ್ತಾಳ್ವಾರ್ ಮತ್ತು ತಿರುಮಂಗೈ ಆಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಇದರ ಬಳಿಯಲ್ಲಿ ತಂಜಿಯಾಳಿನಗರ ಎನ್ನುವ ಕ್ಷೇತ್ರವಿದೆ. ವೇದಸುಂದರ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ನರಸಿಂಹಪ್ಪೆರುಮಾಳ್ ಮತ್ತು ತಂಜನಾಯಕಿ ತಾಯಾರ್ ಇದ್ದಾರೆ. ಇಲ್ಲಿಯೂ ಸೂರ್ಯ ಪುಷ್ಕರಿಣಿ ಮತ್ತು ಶ್ರೀರಾಮ ತೀರ್ಥಗಳಿವೆ. ತಿರುಮಂಗೈ ಆಳ್ವಾರ್ ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ಇಲ್ಲಿಂದ ಉತ್ತರಕ್ಕೆ 3½ ಮೈಲಿ ದೂರದಲ್ಲಿ ಕಂಡಿಯೂರ್ ಎನ್ನುವ ಕ್ಷೇತ್ರವಿದೆ ಕುಂಭಕೋಣದಿಂದಲೂ ಇಲ್ಲಿಗೆ ಬರಬಹುದು. ರುದ್ರಹಸ್ತಗತವಾದ ಬ್ರಹ್ಮ ಕಪಾಲವು ಮೋಕ್ಷ ಪಡೆದ ಸ್ಥಳವಿದು ಎಂದು ಪ್ರತೀತಿ. ಹರನ ಶಾಪವನ್ನು ತೀರಿಸಿದ ಪೆರುಮಾಳ್ ಎಂದು ಇಲ್ಲಿನ ದೇವರ ಹೆಸರು. ಕಮಲಾಕೃತಿ ವಿಮಾನದಿಂದ ಕೂಡಿದ ದೇವಾಲಯದ ಬಳಿ ಕಪಾಲ ತೀರ್ಥವಿದೆ.

ಇಲ್ಲಿಂದ ಉತ್ತರಕ್ಕೆ ಒಂದು ಮೈಲಿದೂರದಲ್ಲಿ ಪ್ರಸಿದ್ಧ ಶಿವಕ್ಷೇತ್ರವಾದ ತಿರುವಯ್ಯಾರ್ ಇದೆ. ಇಲ್ಲಿಯೇ ಸಂಗೀತ ಸಾಮ್ರಾಟರಾದ ಶ್ರೀ ತ್ಯಾಗರಾಜರ ಸಮಾಧಿ ಇರುವುದು.

ತಿರುವಯ್ಯಾರ್ ಪೂರ್ವದಲ್ಲಿ 7½ ಮೈಲಿ ದೂರದಲ್ಲಿ ಗೂಡಲೂರು ಎನ್ನುವ ಕ್ಷೇತ್ರವಿದೆ. ಇಲ್ಲಿಗೆ ಕುಂಭಕೋಣದಿಂದಲೂ ಬರಬಹುದು. ಇಲ್ಲಿ ವೈಯುಂಕಾತ್ತ ಪೆರುಮಾಳ್ ಮತ್ತು ಪದ್ಮಾಸನವಲ್ಲಿ ನಾಚ್ಚಿಯಾರ್‌ರವರುಗಳು ಇದ್ದಾರೆ. ಈ ದೇವಾಲಯವು ಶುದ್ಧ ಸತ್ವ ವಿಮಾನವನ್ನು ಮತ್ತು ಚಕ್ರ ತೀರ್ಥವನ್ನು ಹೊಂದಿವೆ. ಇದನ್ನು ಆಡುದುರೈಪ್ಪೆರುಮಾಳ್ ಕೋಯಿಲ್ ಎಂದೂ ಕರೆಯುತ್ತಾರೆ.

ಇಲ್ಲಿಂದ ಪೂರ್ವಕ್ಕೆ 4½ ಮೈಲಿ ದೂರದಲ್ಲಿ ಕಪಿಸ್ಥಲ ಎನ್ನುವ ವಿಷ್ಣು ಕ್ಷೇತ್ರವಿದೆ. ಇಲ್ಲಿಗೆ ಕುಂಭ ಕೋಣ ದಿಂದಲೂ ಬರಬಹುದು. ಕುಂಭಕೋಣದಿಂದ ಪಶ್ಚಿಮಕ್ಕೆ 9 ಮೈಲಿ ದೂರದಲ್ಲಿ ಪಾಪನಾಶಂ ಇದೆ. ಅಲ್ಲಿಂದ ಉತ್ತರಕ್ಕೆ ಎರಡು ಮೈಲಿ ದೂರದಲ್ಲಿ ಕಪಿಸ್ಥಲವಿದೆ. ಈ ದಾರಿಯಲ್ಲಿ ಕಾವೇರಿಯ ನಾಲ್ಕು ಶಾಖಾನದಿಗಳನ್ನು ದೋಣಿಗಳ ಮುಖಾಂತರ ದಾಟಬೇಕು. ಗಜೇಂದ್ರವರದ, ರಮಾಮಣಿ ನಾಂಚಾರ್ ಹಾಗೂ ಪೋತ್ತಾಮರೈಯಾಳ್ ನಾಂಚಾರ್‌ರವರುಗಳಿಂದ ಕೂಡಿದ ಈ ದೇವಾಲಯವು, ಗಗನಾಕೃತಿ ವಿಮಾನವನ್ನು ಹೊಂದಿದ್ದು ಗಜೇಂದ್ರ ಪುಷ್ಕರಿಣಿ ಹಾಗೂ ಕಪಿಲ ತೀರ್ಥಗಳನ್ನು ಹೊಂದಿದೆ. ತಿರುಮಳಿಶೈ ಹಾಗೂ ತಿರುಮಂಗೈ ಆಳ್ವಾರುಗಳು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

## ಕುಂಭಕೋಣಂ ಸುತ್ತಮುತ್ತ :

ಕುಂಭಕೋಣವು ಪ್ರಖ್ಯಾತಿ ಪಡೆದಿರುವ ಒಂದು ವಿಷ್ಣು ಕ್ಷೇತ್ರವಾಗಿದೆ. ಅಂತೆಯೆ ಇದು ಶಿವಕ್ಷೇತ್ರವೂ ಹೌದು. ಇದು ಹಿಂದೆ ಚೋಳರ ಮುಖ್ಯ ನಗರವಾಗಿತ್ತು. ದಕ್ಷಿಣ ಭಾರತದ ಆಕ್ಸ್‌ಫರ್ಡ್ ಎಂದು ಇದನ್ನು ಆಂಗ್ಲರು ಕರೆಯುತ್ತಿದ್ದರು.

ಇಲ್ಲಿನ ವಿಷ್ಣು ದೇವಾಲಯಗಳಲ್ಲಿ ಮುಖ್ಯವಾದವು ಸಾರಂಗಪಾಣಿ, ಚಕ್ರಪಾಣಿ, ರಾಮಸ್ವಾಮಿ ಮತ್ತು ವರಾಹ ನಾಯನಾರ್ ದೇವಾಲಯಗಳು.

ಸಾರಂಗಪಾಣಿ ದೇವಾಲಯದ ಗೋಪುರವು 147 ಅಡಿ ಎತ್ತರವಾಗಿದೆ. (ಇಲ್ಲಿನ ಕುಂಭೇಶ್ವರರ್ ಕೋಯಿಲ್‌ನ ಗೋಪುರವು 128 ಅಡಿ ಎತ್ತರ) ವೈದಿಕ ವಿಮಾನದಿಂದ ಕೂಡಿದ ಈ ದೇವಾಲಯದಲ್ಲಿ ಸಾರಂಗಪಾಣಿ ಪೆರುಮಾಳ್ (ಆರಾವಮುದನ್) ಕೋಮಲವಲ್ಲಿ ತಾಯಾರ್‌ರವರುಗಳು ಇದ್ದು, ಹೇಮಪುಷ್ಕರಿಣಿಯೂ ಇದೆ. ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈ ಆಳ್ವಾರ್, ಪೆರಿಯಾಳ್ವಾರ್, ತಿರುಮಂಗೈ ಆಳ್ವಾರ್ ಮತ್ತು ಆಂಡಾಳ್‌ರವರುಗಳು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ. ತಿರುಮಳಿಶೈ ಆಳ್ವಾರರ ಜನ್ಮಸ್ಥಳವಿದು.

ಇಲ್ಲಿ 'ಮಹಾಮುಖಕ್ಕುಳಂ' ಎನ್ನುವ ದೊಡ್ಡ ಗಂಟೆ ಇದೆ. 12 ವರ್ಷಗಳಿಗೊಮ್ಮೆ ಪರ್ಯಾಯ ಮಹಾ ಮಹೋತ್ಸವಗಳು ಇಲ್ಲಿ ಜರುಗುತ್ತವೆ. ತಿರುಕ್ಕುಡಂದೈ ಎಂದೂ ಕರೆಯಲ್ಪಡುವ ಈ ನಗರದ ಉತ್ತರದಲ್ಲಿ ಕಾವೇರಿ ನದಿ ಹರಿಯುತ್ತದೆ.

ಕುಂಭಕೋಣದ ಪಶ್ಚಿಮಕ್ಕೆ ನಾಲ್ಕು ಮೈಲಿ ದೂರದಲ್ಲಿ ಸ್ವಾಮಿಮಲೈ ಎಂಬ ಶಿವಕ್ಷೇತ್ರವಿದೆ. ಇಲ್ಲಿ ಪ್ರಸಿದ್ಧಿಗೊಂಡಿರುವ ಸುಬ್ರಹ್ಮಣ್ಯ ದೇವಾಲಯವಿದೆ. ಇಲ್ಲಿಂದ ನೈಋತ್ಯ ದಿಕ್ಕಿನಲ್ಲಿ ಎರಡು ಮೈಲಿ ದೂರದಲ್ಲಿ 'ಪುಳ್ಳಂ ಬೂದಂಗುಡಿ' ಎನ್ನುವ ವಿಷ್ಣು ಕ್ಷೇತ್ರವಿದೆ. ಇಲ್ಲಿಗೆ ಬರಬೇಕಾದರೆ ಮಧ್ಯದಲ್ಲಿ ಎರಡು ನದಿಗಳನ್ನು ದಾಟಬೇಕು. ಇಲ್ಲಿನ ದೇವಾಲಯದಲ್ಲಿ ಶ್ರೀವಲ್ವಿಲಿ ರಾಮ ಮತ್ತು ಪೋತ್ತಾಮರೈಯಾಳ್ ನಾಚ್ಚಿಯಾರ್‌ರವರುಗಳು ಇದ್ದಾರೆ. ಶೋಭನ ವಿಮಾನದಿಂದ ಕೂಡಿದ ಈ ದೇವಾಲಯದ ಬಳಿ ಗೃಧ್ರತೀರ್ಥವಿದೆ. ಗೃಧ್ರರಾಜನಿಗೆ ಶ್ರೀರಾಮನು ಪ್ರತ್ಯಕ್ಷವಾಗಿ ಮೋಕ್ಷ ನೀಡಿದ ಸ್ಥಳವಿದೆಂದು ಪ್ರತೀತಿ ತಿರುಮಂಗೈ ಆಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ. ಇಲ್ಲಿಂದ ಪಶ್ಚಿಮಕ್ಕೆ ಒಂದು ಮೈಲಿ ದೂರದಲ್ಲಿ ಆದನೂರ್ ಇದೆ.

ಕಾಲು ನಡಿಗೆಯಿಂದಲೇ ಹೋಗಬೇಕಾಗಿರುವ ಆದನೂರ್ ದಿವ್ಯಕ್ಷೇತ್ರವು ಕಾಮಧೇನುವಿಗೆ ಪರಮಾತ್ಮನು ಪ್ರತ್ಯಕ್ಷನಾದ ಸ್ಥಳವಾದುದರಿಂದ ಈ ಹೆಸರು ಬಂದಿದೆ. ಪ್ರಣವ ವಿಮಾನದಿಂದ ಕೂಡಿದ ಈ ದೇವಾಲಯದಲ್ಲಿ ಆಂಡಳಕ್ಕುಮೈಯ್ಯನ್ ಪೆರುಮಾಳ್ ಮತ್ತು ಶ್ರೀರಂಗನಾಯಕಿ ನಾಚ್ಚಿಯಾರ್‌ರವರುಗಳು ಇದ್ದು, ಸೂರ್ಯ ಪುಷ್ಕರಿಣಿಯೂ ಇದೆ. ತಿರುಮಂಗೈ ಆಳ್ವಾರ್ ಮಂಗಳಾಶಾಸನ ಮಾಡಿದ್ದಾರೆ.

ಕುಂಭಕೋಣದಿಂದ ದಕ್ಷಿಣದಲ್ಲಿ 4 ಮೈಲಿ ದೂರದಲ್ಲಿ ತಿರುನರೈಯೂರ್ ಎನ್ನುವ ದಿವ್ಯಕ್ಷೇತ್ರವಿದೆ. ಇದನ್ನು ನಾಚ್ಚಿಯಾರ್ ಕೋಯಿಲ್ ಎಂಬುದಾಗಿಯೂ ಕರೆಯುತ್ತಾರೆ. ಇದರ ಬಳಿಯಲ್ಲಿ ಮಣಿಮುಕ್ತಾ ನದಿ ಹರಿಯುತ್ತಿದೆ. ರಾಕ್ಷಸನೋರ್ವನಿಂದ ವೈನತೇಯನು ವೈರಮುಡಿಯನ್ನು ಜಯಿಸಿ ತರುತ್ತಿರಲು, ಮತ್ತೋರ್ವ ರಾಕ್ಷಸನು ಅವನ ಮೇಲೆ ಧಾಳಿ ಮಾಡಲು, ಆ ಸಮಯದಲ್ಲಿ ಕಿರೀಟದಿಂದ ಮಾಣಿಕ್ಯ ಶಿಖರವು ನದಿಯಲ್ಲಿ ಬಿದ್ದು ಆ ನದಿಗೆ ಮಣಿಮುಕ್ತಾ ಎಂಬ ಹೆಸರು ಬಂದಿತು. ಇಂದಿಗೂ ಇಲ್ಲಿನ ದೇವರ ಕಿರೀಟದಲ್ಲಿ ಶಿಖರವಿಲ್ಲದೆ ಅದು ಬೋಳಾಗಿದೆ. ಅಲ್ಲದೆ ಇಲ್ಲಿನ ದೇವರ ವಾಹನವು ಗರುಡನಾಗಿದೆ. ಇಲ್ಲಿನ ಗರುಡೋತ್ಸವವು ವೈಶಿಷ್ಟ್ಯಪೂರ್ಣವಾಗಿದೆ. ಶ್ರೀನಿವಾಸ ವಿಮಾನವಿರುವ ಈ ದೇವಾಲಯದಲ್ಲಿ ನಂಬಿಪೆರುಮಾಳ್ ಮತ್ತು ನಂಬಿಗೈ ನಾಚ್ಚಿಯಾರ್‌ರವರುಗಳು ಇದ್ದಾರೆ.

ಈ ದಿವ್ಯದೇಶಕ್ಕೆ ದಕ್ಷಿಣದಲ್ಲಿ ಮೂರು ಮೈಲಿ ದೂರದಲ್ಲಿ ತಿರುಚ್ಚೆರೈ ಎನ್ನುವ ದಿವ್ಯಕ್ಷೇತ್ರವಿದೆ. ಇದನ್ನು ಸಾರಕ್ಷೇತ್ರವೆಂದೂ ಕರೆಯುತ್ತಾರೆ. ಸಾರ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ಸಾರನಾಥ ಪೆರುಮಾಳ್ ಮತ್ತು ಸಾರನಾಯಕಿ ತಾಯಾರ್‌ರವರುಗಳಿದ್ದು, ಸಾರ ಪುಷ್ಕರಿಣಿಯನ್ನು ಹೊಂದಿದೆ. ತಿರುಮಂಗೈ ಆಳ್ವಾರ್‌ರ ಮಂಗಳಾಶಾಸನವಿದೆ.

ಕುಂಭಕೋಣಕ್ಕೆ ಪೂರ್ವದಲ್ಲಿ ಕಾಲದಾರಿಯಲ್ಲಿ ಮೂರುಮೈಲಿ ನಡೆದು ಹೋದರೆ ತಿರುವಿಣ

ಗರ್ ಎನ್ನುವ ದಿವ್ಯಕ್ಷೇತ್ರವಿದೆ. ಇದು 'ತಂಜಾವೂರ್ ಜಿಲ್ಲಾ ತಿರುಪತಿ' ಎಂದೇ ಖ್ಯಾತಿಗೊಂಡಿದೆ. ಇಲ್ಲಿಗೆ ಸಾವಿರಾರು ಯಾತ್ರಿಕರು ಪ್ರತಿನಿತ್ಯ ಬಂದು ಹೋಗುತ್ತಾರೆ. ಇಲ್ಲಿ ಮಾರ್ಕಂಡೇಯ ಮಹರ್ಷಿಗಳು ತಪಸ್ಸು ಮಾಡಿಕೊಂಡಿದ್ದು, ಓರ್ವ ಬಾಲಕಿಯನ್ನು ಸಾಕಿಕೊಂಡಿದ್ದರು. ಒಮ್ಮೆ ಅವರು ಆಶ್ರಮದಲ್ಲಿ ಇಲ್ಲದಿದ್ದಾಗ, ವಿಷ್ಣುವು ಮಾನವ ರೂಪವನ್ನು ಧರಿಸಿ ಇಲ್ಲಿಗೆ ಬಂದು, ಆ ಬಾಲಕಿಯನ್ನು ವಿವಾಹವಾದನು. ಹಿಂತಿರುಗಿ ಬಂದ ಋಷಿಯು ವಿಷಯ ತಿಳಿದು ಮಾನವನನ್ನು ಶಪಿಸಿದರು. ಕೂಡಲೆ ವಿಷ್ಣುವು ತನ್ನ ನಿಜರೂಪ ತೋರಿದನು. ಆಗ ಋಷಿಯು 'ಬಾಲಕಿಗೆ ಅಡಿಗೆ ಮಾಡುವುದೇ ಏನು, ಅದರಲ್ಲಿ ಉಪ್ಪು ಹಾಕುವುದೂ ಗೊತ್ತಿಲ್ಲವಲ್ಲ' ಎಂದು ಹೇಳಲು, ವಿಷ್ಣುವು 'ಇನ್ನು ಮೇಲಿಂದ ತನಗೆ ಉಪ್ಪಿಲ್ಲದೆ ಪ್ರಸಾದವನ್ನೆ ನೈವೇದ್ಯಕ್ಕೆ ಇಡಬೇಕೆಂದು' ಆಜ್ಞಾಪಿಸಿದನು. ಯಾರಾದರೂ ಉಪ್ಪಿನ ವಸ್ತುವನ್ನು ತರಲು ಪ್ರಯತ್ನಿಸಿದರೆ ಸರ್ಪವು ದೇವಾಲಯದ ಗರ್ಭಗುಡಿಯ ಬಳಿ ಎದುರಾಗಿ, ಆ ಉಪ್ಪನ್ನು ಹೊರಗೆ ಬಿಸಾಕುವವರೆಗೂ ಆ ಸರ್ಪವು ಅಲ್ಲಿಂದ ಕದಲುವುದಿಲ್ಲದೆಂದು ಹೇಳುತ್ತಾರೆ. ಆಗಾಗ ಇಂದಿಗೂ ಸರ್ಪವು ಕಂಡು ಬರುವುದೆಂದು ಪ್ರತೀತಿ. ಆದುದರಿಂದಲೆ ಇಲ್ಲಿನ ದೇವರಿಗೆ ಉಪ್ಪರಿಯಪ್ಪನ್ ಎಂದು ಹೆಸರು. ಈ ಕ್ಷೇತ್ರಕ್ಕೆ ತುಳಸೀವನ ಎಂಬ ಹೆಸರೂ ಇದೆ. ಪೊಯ್‌ಗೈ ಆಳ್ವಾರ್, ಪೇಯಾಳ್ವಾರ್, ತಿರುಮಂಗೈ ಆಳ್ವಾರರು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ನಾಚ್ಚಿಯಾರ್ ಕೋವಿಲ್‌ಗೆ ಪಶ್ಚಿಮದಲ್ಲಿ ಮೂರು ಮೈಲಿ ದೂರದಲ್ಲಿ ನಂದಿಪುರ ವಿಣ್ಣಗರಂ (ನಾಥನ್ ಕೋಯಿಲ್) ಎನ್ನುವ ದಿವ್ಯಕ್ಷೇತ್ರವಿದೆ. ಮಂದಾರ ವಿಮಾನದಿಂದ ಕೂಡಿರುವ ಇಲ್ಲಿನ ದೇವಾಲಯದಲ್ಲಿ ವಿಣ್ಣಗರಪ್ಪೆರುಮಾಳ್, ಜಗನ್ನಾಥ, ನಾಥನಾಥ ಪೆರುಮಾಳ್ ಮತ್ತು ಚಂಪಕವಲ್ಲಿ ತಾಯಾರ್ ಇದ್ದಾರೆ.

## ಮಾಯಾವರಂ ಸುತ್ತಮುತ್ತ :

ಮಾಯಾವರಂಗೆ ಪಶ್ಚಿಮಕ್ಕೆ 5 ಮೈಲಿ ದೂರದಲ್ಲಿ ಕುಟ್ರಾಳಂ ಸ್ಟೇಷನ್ ಇದೆ. ಇದಕ್ಕೆ ಆಗ್ನೇಯದಲ್ಲಿ $3\frac{1}{2}$ ಮೈಲಿ ದೂರದಲ್ಲಿ ತಿರುವಳುಂದೂರ್ ಎನ್ನುವ ದಿವ್ಯಕ್ಷೇತ್ರವಿದೆ. ಇದನ್ನು ತೇರಳಂದೂರ್ ಎಂದೂ ಕರೆಯುತ್ತಾರೆ. ಕಂಬ

(23ನೇ ಪುಟ ನೋಡಿ)




# ರಸಪೂರ್ಣ ಲೇಖನಗಳ ವಿಶೇಷ ಸಂಚಿಕೆ

ಕರ್ನಾಟಕರಾಜ್ಯದ ಸರಕಾರದಿಂದ ನಿರ್ಮಾಣಗೊಂಡ ಭವ್ಯವಾದ ಕರ್ನಾಟಕ ಕಲ್ಯಾಣ ಮಂಟಪವನ್ನು ಇತ್ತೀಚೆಗೆ ತಿರುಪತಿಯಲ್ಲಿ ಉದ್ಘಾಟಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಆದ್ಯ ರಾಮಾಚಾರ್ಯರವರ ಸಂಪಾದಕತ್ವದಲ್ಲಿ ವಿವಿಧ ಲೇಖಕರ ಕನ್ನಡ, ಆಂಗ್ಲ ಮತ್ತು ಹಿಂದೀ ಭಾಷೆಗಳಲ್ಲಿನ ಧಾರ್ಮಿಕ ಭಕ್ತಿ ರಸಪೂರ್ಣ ಲೇಖನಗಳನ್ನು ಒಳಗೊಂಡ ಈ ವಿಶೇಷ ಸಂಚಿಕೆಯನ್ನು ಹೊರತರಲಾಗಿದೆ.

ದಿವಂಗತ ಕೊರಟಿ ಶ್ರೀನಿವಾಸರಾಯರು ತಮ್ಮ "ಕನ್ನಡ ವಾಙ್ಮಯದಲ್ಲಿ ಶ್ರೀ ವೆಂಕಟೇಶ" ಲೇಖನದಲ್ಲಿ ಸಮಸ್ತ ವೇದಗಳಲ್ಲಿನ, ಪುರಾಣಗಳಲ್ಲಿನ ಶ್ರೀ ವೆಂಕಟೇಶನ ಮಹಿಮೆಯನ್ನು ವಿಸ್ತಾರವಾಗಿ ನಿರೂಪಿಸಿದ್ದಾರೆ. ವೇದವ್ಯಾಸರು ರಚಿಸಿದ ಹದಿನೆಂಟು ಪುರಾಣಗಳಲ್ಲಿ ವೆಂಕಟಾಚಲ ಮಹಾತ್ಮೆಯು ಕಂಡುಬಂದು ಅವುಗಳಲ್ಲಿ ಉಳಿದ ಹತ್ತು ಪುರಾಣಗಳಲ್ಲಿ ಶ್ರೀ ವೆಂಕಟೇಶನ ಮಹಿಮೆಯನ್ನು ಹಾಡಿ ಹೊಗಳಿದ ಬಗ್ಗೆ ಹೃದಯಂಗಮವಾಗಿ ಶ್ಲೋಕಗಳನ್ನು ಬರೆದು ವಿಸ್ತಾರವಾಗಿ ವಿವರಿಸಲಾಗಿದೆ. ಶ್ರೀನಿವಾಸರಾಯರ ಲೇಖನದಲ್ಲಿ ಹರಿದಾಸ ಸಾಹಿತ್ಯದ ಶ್ರೀಪಾದರಾಜರು, ಪುರಂದರದಾಸರು, ಕನಕದಾಸರು, ವೆಂಕಟದಾಸರು, ವಿಜಯರಾಯರು, ಗೋಪಾಲದಾಸರು, ಶ್ರೀನಿವಾಸನನ್ನು ಕುರಿತು ರಚಿಸಿದ ಗ್ರಂಥಗಳು, ಹಾಡುಗಳ ಬಗ್ಗೆ ಉಲ್ಲೇಖನೀಯ ವರದಿಯಿದೆ. 19ನೆಯ ಶತಮಾನದಲ್ಲಿದ್ದ ಇಬ್ಬರು ಹರಿದಾಸರಾದ ಅನಂತಾದ್ರೀಶರೆಂದು ಪ್ರಖ್ಯಾತರಾದ ಹರಿದಾಸರು ಮತ್ತು ಏರಿ ಆಚಾರ್ಯರು ಬರೆದ ಕಾವ್ಯಗಳ ಬಗ್ಗೆಯೂ ಮಾಹಿತಿಯನ್ನು ನೀಡಿದ್ದಾರೆ.

ಕೆ. ಅಪ್ಪಣ್ಣಾಚಾರ್ಯರ "ಕರ್ನಾಟಕ ಹರಿದಾಸರು ಹಾಗೂ ಶ್ರೀನಿವಾಸ" ಲೇಖನದಲ್ಲಿ ಮುಖ್ಯವಾಗಿ ಕರ್ನಾಟಕ ಹರಿದಾಸರು ಶ್ರೀನಿವಾಸನನ್ನು ಹಾಡಿ ಹೊಗಳಿದ್ದನ್ನು ವಿವರಿಸಲಾಗಿದೆ. ಹರಿದಾಸರಿಗೆ ಶ್ರೀ ವೆಂಕಟೇಶನ ಸೇವೆಯನ್ನು ಪ್ರತ್ಯಕ್ಷ ಮಾಡಲು ಸಾಧ್ಯವಾಗದಿದ್ದರೂ ತಮ್ಮ ಗುರುಗಳಲ್ಲೇ ವೆಂಕಟೇಶನನ್ನು ಕಂಡ ಅನೇಕ ಹರಿದಾಸರ ಭಕ್ತಿಪೂರ್ವಕ ಸಂಗತಿಗಳ ಹಾಗೂ ಅವರ ಲೇಖನಗಳ ಬಗ್ಗೆ ಮಾಹಿತಿಯಿದೆ. ಲೇಖಕರು ಹೇಳುವಂತೆ "ಏಳು ನಾರಾಯಣ ಏಳು ಲಕ್ಷ್ಮೀರಮಣ ಏಳು ಶ್ರೀ ಗಿರಿಯೊಡೆಯ ವೆಂಕಟೇಶ" ಎಂಬ ಪುರಂದರದಾಸರ ಕೃತಿಯು ನಿಜಕ್ಕೂ ಅರ್ಥಗರ್ಭಿತವಾಗಿದ್ದು ಸುಪ್ರಭಾತದ ನಿಜಮರ್ಮವನ್ನು ವ್ಯಕ್ತಪಡಿಸುವಲ್ಲಿ ಸಂದೇಹವಿಲ್ಲ.

"ದಿವ್ಯಪ್ರಬಂಧಗಳಲ್ಲಿ ಕಂಡ ಶ್ರೀನಿವಾಸ" ಶ್ರೀ ರಂಗವಟ್ ನರಸಿಂಹಾಚಾರ್ಯರ ಮತ್ತೊಂದು ಲೇಖನ. ಶ್ರೀ ವೈಷ್ಣವರ ಗುರುವರ್ಯ ಶ್ರೀ ರಾಮಾನುಜಾಚಾರ್ಯರ ದಿವ್ಯಸಂದೇಶವನ್ನು ಲೇಖಕರು ಈ ತಮ್ಮ ಲೇಖನದಲ್ಲಿ ಸುಂದರವಾಗಿ ಸ್ಪಷ್ಟವಾಗಿ ವರ್ಣಿಸಿದ್ದಾರೆ. ಅಲ್ಲದೆ ಆಳ್ವಾರುಗಳು ಶ್ರೀನಿವಾಸನನ್ನು ದಿವ್ಯ ಪ್ರಬಂಧಗಳಲ್ಲಿ ಹಾಡಿ ಹೊಗಳಿದ ಬಗ್ಗೆ ವಿಶೇಷವಾಗಿ ಲೇಖನ ಹೊರ ಹೊಮ್ಮಿದೆ. ಶ್ರೀನಿವಾಸನ ವಿಷಯವಾಗಿ ಪೊಯ್ಗೆಯಾಳ್ವಾರರು 10, ಭೂದತ್ತಾಳ್ವಾರರು 11, ಪೇಯಾಳ್ವಾರರು 19, ತಿರುಮಳಿಶೈಯಾಳ್ವಾರರು 16, ನಮ್ಮಾಳ್ವಾರರು 49, ಕುಲಶೇಖರರು 11, ಪೆರಿಯಾಳ್ವಾರರು 7, ತಿರುಪ್ಪಾಣಾಳ್ವಾರ್ 2, ತಿರುಮಂಗೈಯಾಳ್ವಾರ್ 66 ಮತ್ತು ಪೆರಿಯಾಳ್ವಾರರ ಪ್ರೀತಿಯ ಸಾಕು ಮಗಳಾದ ಆಂಡಾಳ್ – ಶ್ರೀ ಗೋದಾದೇವಿ 16 ಪಾಶುರಗಳನ್ನು ರಚಿಸಿದ್ದಾರೆ. ಈ ಲೇಖನದಲ್ಲಿ ಹೀಗೆ ವಿವಿಧ ಆಳ್ವಾರರು ಶ್ರೀನಿವಾಸನನ್ನು ದಿವ್ಯ ಪ್ರಬಂಧದಲ್ಲಿ ಕಂಡ ಬಗ್ಗೆ ಪ್ರಸ್ತಾಪಿಸಿ ವರ್ಣಿಸಲಾಗಿದೆ.

ಕರ್ನಾಟಕದ ಅರಸರು ದೇವರಿಗೆ ಸಲ್ಲಿಸಿದ ಅಮೂಲ್ಯ ಸೇವಾವಿವರಗಳನ್ನು ನೀಡಿದ್ದಾರೆ. ಐತಿಹಾಸಿಕ ಉಲ್ಲೇಖಗಳನ್ನು ಕೊಟ್ಟು ಹೃದಯಂಗಮವಾಗಿ ವಿವರಿಸಿದ್ದಾರೆ. ಈ ಬಗೆಗಿನ ಚಿತ್ರಗಳೂ ಇರುವುದು ಒಂದು ಹೆಚ್ಚಿನ ಅಂಶವಾಗಿದೆ.

ಶ್ರೀ ವೈ. ಆರ್. ವಾಸುದೇವ ಭಟಾಚಾರ್ಯರು ಸಪ್ತಗಿರಿ ಕ್ಷೇತ್ರದ ಮಹಿಮೆ ಹಾಗೂ ವೆಂಕಟೇಶ್ವರನ ಪವಾಡಗಳನ್ನು ಕುರಿತು ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ವಿವರಿಸಿದ್ದಾರೆ.

ಎ. ಪಂಕಜರವರ ಲೇಖನ 'ಭಕ್ತವತ್ಸಲ ಶ್ರೀನಿವಾಸ' ಬಹುಶಃ ಎಲ್ಲ ಲೇಖನಗಳಿಗಿಂತ ಕೊಂಚ ಭಿನ್ನವಾದ ಲೇಖನವೆಂದು ಹೇಳಬಹುದು. ಅನಂತರಾಮಯ್ಯಂಗಾರ್ಯರು ಹಾಗೂ ಕೃಷ್ಣಮಾಚಾರ್ ಅವರುಗಳಿಗಾದ ಅನುಭವವನ್ನು ತಮ್ಮ ಭಕ್ತವತ್ಸಲ ಎಂಬ ಪ್ರಬಂಧದಲ್ಲಿ ವರ್ಣಿಸಿದ್ದಾರೆ.

ಸಂಚಿಕೆಯ ಪ್ರಧಾನ ಸಂಪಾದಕರಾದ ಶ್ರೀ ಆದ್ಯರಾಮಾಚಾರ್ಯರು 'ತಿರುಮಲಾಧೀಶನಿಗೆ ಕರ್ನಾಟಕದವರ ಸೇವೆ' ಎಂಬ ಲೇಖನದಲ್ಲಿ

ಶ್ರೀ ಗುಂಡಪ್ಪದೀಕ್ಷಿತರು ಶೈವಾಗಮ ಆರಾಧಕರು ಹಾಗೂ ತಿರುಪತಿ ಕ್ಷೇತ್ರ–ಎಂಬ ವಿವರಣಾತ್ಮಕ ಲೇಖನದಲ್ಲಿ ಶ್ರೀನಿವಾಸನ ಮೂಲದ ಬಗ್ಗೆಯೇ ಚಿಂತನೆ ನಡೆಸಿ ಆದಿಶಕ್ತಿ ರೂಪ ಎಂದು ಹೇಳಿರುವುದು ತುಸು ಚರ್ಚಾಸ್ಪದ ಅಂಶ.

ಪುರಂದರದಾಸರು ಕಂಡ ಶ್ರೀನಿವಾಸನನ್ನು ಕುರಿತು ಶ್ರೀ ಬಾ. ಕೃ. ಸೋಮಶೇಖರರು ವರ್ಣಿಸಿದರೆ, ನಿರುಪಮಾ ಅವರು ಮಹಾಪುರುಷರು ತಿರುಪತಿಯನ್ನು ಹೇಗೆ ಕಂಡರು ಎಂಬುದನ್ನು ವಿವರಿಸಿದ್ದಾರೆ. ಶ್ರೀ ಜಯರಾಮಾಚಾರ್ಯ – ಮಳಗಿಯವರು ಶ್ರೀನಿವಾಸನ ಭಕ್ತವಾತ್ಸಲ್ಯವನ್ನು ಸೋದಾಹರಣವಾಗಿ ವಿವರಿಸಿದ್ದಾರೆ. ತಮಿಳಿನ ದಿವ್ಯ ಪ್ರಬಂಧಗಳಲ್ಲಿ ಶ್ರೀನಿವಾಸ ಹೇಗೆ ಮೂಡಿಬಂದಿದ್ದಾನೆಂಬುದನ್ನು ಶ್ರೀದೇವಿಯವರು ವಿವರಿಸಿದ್ದಾರೆ. ಪಂಡಿತ ಜಿ. ಎನ್. ಜಯತೀರ್ಥಾಚಾರ್ಯರು ಶ್ರೀನಿವಾಸನು ಭಕ್ತವತ್ಸಲನೆಂಬುದನ್ನು ವಿವರಿಸಿದ್ದಾರೆ.

ಶ್ರೀ ಪ್ರಹ್ಲಾದರಾಯರ ಕಲಿಯುಗದ ಇಷ್ಟದೈವ ಎಂಬ ಲೇಖನ ಕಿರಿದಾದರೂ ಹಿರಿಯರ್ಥ

(24 ನೇ ಪುಟ ನೋಡಿ)

**ಕರ್ನಾಟಕ ಕಲ್ಯಾಣ ಮಂಟಪ ವಿಶೇಷ ಸಂಚಿಕೆ**

ಸಂಪಾದಕರು : ಆದ್ಯ ರಾಮಾಚಾರ್ಯ,

ಪುಟಗಳು : ಸುಮಾರು ಇನ್ನೂರು;

ಪ್ರಕಾಶಕರು : ಕರ್ನಾಟಕ ಧಾರ್ಮಿಕ ದತ್ತಿ ಇಲಾಖೆ, ಕೆಂಪೇಗೌಡ ರಸ್ತೆ, ಬೆಂಗಳೂರು.

ಬೆಲೆ : – ?

ಗ್ರಂಥಾಂತರಂಗ

# ಪುರಂತರದಾಸರು ರಚಿಸಿದ ಶ್ರೀನಿವಾಸನ ಹಾಡುಗಳು

**ಶ್ರೀಶ್ರೀನಿವಾಸನ ಹಾಡುಗಳು** ಸಂ-1

ಪುಟಗಳು: 108+12+4

ಬೆಲೆ: ರೂ. 3-25

ಪ್ರತಿಗಳಿಗಾಗಿ:

ವೆಲ್‌ಫೇರ್ ಆಫೀಸರ್,

ಸೇಲ್ಸ್‌ವಿಂಗ್

ತಿ. ತಿ. ದೇ. ತಿರುಪತಿ.

ಕರ್ನಾಟಕದ ಹರಿದಾಸರೆಲ್ಲರೂ ಶ್ರೀನಿವಾಸನ ಭಕ್ತರೆ, ಶ್ರೀ ವೆಂಕಟೇಶ್ವರ ಸ್ವಾಮಿಯ ಆರಾಧನೆಯಿಂದ ತುಷ್ಟರಾಗಲು ಹಾತೊರೆದು ಕರ್ನಾಟಕದಿಂದ ತಿರುಮಲೆಯತ್ತ ಧಾವಿಸಿದವರೇ. ಈ ಹರಿದಾಸರೆಲ್ಲ ಶ್ರೀನಿವಾಸನ ಬಗ್ಗೆ ವಿಧವಿಧವಾಗಿ ಹಾಡಿದ್ದಾರೆ. ಅವುಗಳನ್ನೆಲ್ಲ ವೆಂಕಟೇಶ್ವರಸ್ವಾಮಿಯ ಭಕ್ತವೃಂದಕ್ಕೆ ಪರಿಚಯಿಸುವುದು ದಾಸಸಾಹಿತ್ಯ ಪ್ರಾಜೆಕ್ಟಿನ ಗುರಿಗಳಲ್ಲಿ ಒಂದು. ಅದರಂಗವಾಗಿಯೇ ಶ್ರೀನಿವಾಸನ ಹಾಡುಗಳು ಎಂಬ ಸಂಪುಟಗಳ ಪ್ರಕಟನೆ.

ಪ್ರಸ್ತುತ ಶ್ರೀ ಶ್ರೀನಿವಾಸನ ಹಾಡುಗಳು ಸಂಪುಟ-1 - ಕೃತಿಯಲ್ಲಿ ಕರ್ನಾಟಕ ಸಂಗೀತದ ಪಿತಾಮಹರೆಂದು ಹೆಸರು ಪಡೆದ ಪುರಂದರದಾಸರು ಶ್ರೀನಿವಾಸನನ್ನು ಕುರಿತು ಹಾಡಿದ ಕೃತಿಗಳಲ್ಲಿ ಐವತ್ತೆರಡು ಹಾಡುಗಳನ್ನು ಸಂಗ್ರಹಿಸಲಾಗಿದೆ. ಇವುಗಳನ್ನು ಭಜನೆಗೆ ಹಾಗೂ ಉಪಾಸನೆಗೆ ಅನುಕೂಲವಾಗುವಂತೆ ಕ್ರಮಬದ್ಧಗೊಳಿಸಲಾಗಿದೆ. ಸಂಗೀತ ಸಾಹಿತ್ಯಾಸಕ್ತ ಧರ್ಮಾಸಕ್ತರಿಗಾಗಿ ವಿಶೇಷ ಟಿಪ್ಪಣಿ, ಕಠಿಣ ಪದಗಳ ಅರ್ಥಗಳನ್ನೂ ನೀಡಲಾಗಿದ್ದು ಹೆಚ್ಚು ಜನೋಪಯೋಗಿಯಾಗಿಸಲಾಗಿದೆ. ಇಲ್ಲಿ ಬಳಸಲಾಗಿರುವ ಹಾಡುಗಳ ಅಕಾರಾದಿಯನ್ನೂ ನೀಡಿರುವುದು ಇನ್ನೊಂದು ಹೆಚ್ಚಿನ ಪ್ರಯೋಜನ.

ಕೃತಿಯ ಸಂಪಾದಕರು ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯ ಅವರು. ಸುಮಾರು ನಲವತ್ತು ಪುಟಗಳಷ್ಟು ಪುರಂದರದಾಸರ ಜೀವನ ಪರಿಚಯವನ್ನೂ ಒದಗಿಸಿಕೊಟ್ಟಿದ್ದಾರೆ. ಪುರಂದರದಾಸರ ಬಗ್ಗೆ ಹಿಂದೆ ಇದ್ದ ಎಲ್ಲಾ ಭಿನ್ನಾಭಿನ್ನಾಯಗಳಲ್ಲಿ ಒಂದು ಸಮನ್ವಯವನ್ನೂ ಸಾಧಿಸಿ, ಸಾಮಾನ್ಯರಿಗೂ ಪುರಂದರರ ಜೀವನಚಿತ್ರ ಸುಲಭವಾಗಿ ಗ್ರಹಿಕೆಗೆ ಬರುವಂತೆ ವಿವರಿಸಿದ್ದಾರೆ. ಅದಕ್ಕಾಗಿ ಪುರಂದರರ ಹಾಡುಗಳನ್ನೂ, ವಿಜಯದಾಸ, ಗುರುಮಧ್ವಪತಿ ದಾಸರುಗಳ ಹಾಡುಗಳನ್ನೂ ಬಳಸಿಕೊಂಡಿದ್ದಾರೆ. ಅವರ ಕಾಲವನ್ನು ಕುರಿತು ಒಂದು ನಿಲುವನ್ನು ತಳೆದಿದ್ದಾರೆ. ದಾಸರ ಮಕ್ಕಳ ಬಗ್ಗೆಯೂ ನಾಲ್ಕು ಮಾತುಗಳನ್ನು ಬರೆದು ಆ ಬಗ್ಗೆ ಆಧಾರಗಳಾದ ವಿಜಯದಾಸರ ಹಾಡು ಹಾಗೂ ತಾಮ್ರಶಾಸನಗಳ ನಡುವೆ ಸಮನ್ವಯವನ್ನು ಸಾಧಿಸಿದ್ದಾರೆ.

ಪುರಂದರದಾಸರ ವ್ಯಕ್ತಿತ್ವವನ್ನು ಇಂದಿನ ದೃಷ್ಟಿಯಿಂದ ಕಂಡಿರುವ ಈ ಜೀವನ ಚರಿತ್ರೆಯಲ್ಲಿ ವ್ಯಾಸರಾಯರು ಕಂಡ ಪುರಂದರರ ಚಿತ್ರವೂ ಇದೆ. ಜೊತೆಗೇ ಒಂದು ವರ್ಣಮಯವಾದ ಪುರಂದರರ ಚಿತ್ರ (ಶ್ರೀ ಎಂ. ರಾಮನರಸಯ್ಯ) ಹಾಗೂ ಶ್ರೀ ವೆಂಕಟೇಶ್ವರಸ್ವಾಮಿಯ ತ್ರಿವರ್ಣ ಚಿತ್ರಗಳಿವೆ. ನೂರ ಹನ್ನೆರಡು ಪುಟಗಳ ಈ ಸಂಪುಟದ ಬೆಲೆ ಕೇವಲ ಮೂರು ರೂಪಾಯಿ ಇಪ್ಪತ್ತೈದು ಪೈಸೆ ಮಾತ್ರವೇ ಎಂದಾಗ ಎಲ್ಲರೂ ಈ ಪುಸ್ತಕವನ್ನು ಕೊಳ್ಳಬಹುದು ಎನ್ನಿಸುತ್ತದೆ.



(20 ನೇ ಪುಟದಿಂದ)

ಕವಿಯು ಜನಿಸಿದ ಸ್ಥಳವಿದು. ಇಲ್ಲಿ ಶ್ರೀರಂಗನಾಥ ಮತ್ತು ಗೋವಿಂದರಾಜ ಸನ್ನಿಧಿಗಳಿವೆ.

ಮಾಯಾವರಂ ಬಳಿಯ ಕೊಲ್ಲು ಮಾಂಗುಡಿ ಸ್ಟೇಷನ್ನಿನಿಂದ ಹೊಲಗಳ ಬದಿಗಳ ಮೇಲೆ ಒಂದು ಮೈಲಿ ನಡೆದರೆ ಶಿರುಪುಲಿಯೂರ್ ಎನ್ನುವ ದಿವ್ಯ ಕ್ಷೇತ್ರ ಸಿಗುತ್ತದೆ. ನಂದವರ್ಧನ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ಅರುಮಾಕಡಲ್ ಪೆರುಮಾಳ್ ಮತ್ತು ತಿರುಮಾಮಗಳ್ ನಾಚ್ಚಿಯಾರ್‌ರವರುಗಳು ಇದ್ದಾರೆ. ಇಲ್ಲಿ ಸರಸ್ಸು ಮತ್ತು ಮಾನಸ ಪುಷ್ಕರಿಣಿಗಳಿವೆ. ವ್ಯಾಘ್ರವಾದ ಮುನಿಗೆ ದೇವರ ಸೇವೆ ಮಾಡುವ ಯೋಗವು ಇಲ್ಲಿಯೇ ಲಭ್ಯವಾಯಿತು. ಶ್ರೀಮನ್ನಾರಾಯಣನು ಇಲ್ಲಿ ಬಾಲಶಯನನಾಗಿದ್ದಾನೆ. ತಿರುಮಂಗೈ ಆಳ್ವಾರರಿಂದ ಇಲ್ಲಿ ಮಂಗಳಾಶಾಸನ.

ಮಾಯಾವರಂ ಸ್ಟೇಷನ್ನಿನಿಂದ ಉತ್ತರಕ್ಕೆ ಕಾಲುದಾರಿಯಲ್ಲಿ ತಿರುವಿಂದಳೂರ್ ದಿವ್ಯಕ್ಷೇತ್ರವಿದೆ. ವೇದಚಕ್ರ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ಸುಗಂಧವನನಾಥಪ್ಪೆರುಮಾಳ್, ಮರುವಿನಿಯಮೈಂದಪ್ಪೆರುಮಾಳ್, ಪರಿಮಳ ರಂಗನ್, ಚಂದ್ರಶಾಪ ವಿಮೋಚನ ನಾಚ್ಚಿಯಾರು ಪುಂಡರೀಕವಲ್ಲಿ ನಾಚ್ಚಿಯಾರ್‌ರವರುಗಳು ಇದ್ದಾರೆ. ಚಂದ್ರ ಪುಷ್ಕರಿಣಿ ಇರುವ ಈ ಕ್ಷೇತ್ರದಲ್ಲಿ ತಿರುಮಂಗೈ ಆಳ್ವಾರ್‌ರವರು ಮಂಗಳಾಶಾಸನ ಮಾಡಿದ್ದಾರೆ.

## ಶೀರ್ಕಾಳಿ ಸುತ್ತಮುತ್ತ :

ಶೀರ್ಕಾಳಿಯನ್ನು ಶಿಯ್ಯಾಳಿ ಅಥವಾ ಶೀರ್ಕಾಷಿ ಎಂದೂ ಕರೆಯುತ್ತಾರೆ. ಇದಕ್ಕೆ ಶ್ರೀರಾಮ ವಿಣ್ಣಗರವ್ ಅಥವಾ ಕಾಳಚ್ಚಿ ರಾಮ ವಿಣ್ಣಗರಂ ಎಂಬ ಹೆಸರುಗಳಿವೆ. ಇಲ್ಲಿ ತಿರುಮಂಗೈ ಆಳ್ವಾರ್‌ರವರು ಸಂಬಂಧರನ್ನು ಜಯಿಸಿ, ವೈಷ್ಣವ ಮತ ಸಿದ್ಧಾಂತವನ್ನು ಪುನರ್‌ಸ್ಥಾಪಿಸಿ, ತಾಡಾಳಪ್ಪೆರುಮಾಳ್‌ನನ್ನು ಮತ್ತೆ ಪ್ರತಿಷ್ಠಾಪಿಸಿದರು. ಪುಷ್ಕಳಾವರ್ತಕ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯವು ತಾಡಾಳಪ್ಪೆರುಮಾಳ್, ತ್ರಿವಿಕ್ರಮ ಮೂರ್ತಿ, ಮಟ್ಟವಿಳುಂಕುಳವಿ ನಾಚ್ಚಿಯಾರ್‌ರಿಂದ ಶೋಭಿತವಾಗಿ, ಶಂಖಪುಷ್ಕರಿಣಿ ಮತ್ತು ಚಕ್ರತೀರ್ಥಗಳನ್ನು ಹೊಂದಿದೆ.

ಶೀರ್ಕಾಳಿಗೆ ಆಗ್ನೇಯದಲ್ಲಿ ತರಗಂಬಾಡಿಗೆ ಹೋಗುವ ಹೆದ್ದಾರಿಯಲ್ಲಿ ಹತ್ತು ಮೈಲಿ ದೂರದಲ್ಲಿ ತಲೈಚ್ಚಂಗ ನಾಣ್ಮದಿಯಾ (ತಲೈಚಂಗಾಡು) ಎನ್ನುವ ದಿವ್ಯಕ್ಷೇತ್ರವಿದೆ. ಮಾಯಾವರಂನಿಂದಲೂ ಇಲ್ಲಿಗೆ ಬರಬಹುದು. ನಾಣ್ಮದೀಯಪ್ಪೆರುಮಾಳ್, ವೇಣ್ ಶುಡರ್ ಪೆರುಮಾಳ್, ತಲೈಚ್ಚಂಗ ನಾಂಚಾರ್, ಶೆಂಗಮಲವಲ್ಲಿ ತಾಯಾರರಿಂದ ಕೂಡಿದ ಈ ದೇವಾಲಯವು ಚಂದ್ರವಿಮಾನವನ್ನು ಹೊಂದಿದ್ದು, ಚಂದ್ರ ಪುಷ್ಕರಿಣಿಯನ್ನು ಹೊಂದಿದೆ.

ಶೀರ್ಕಾಳಿಯಿಂದ ಆಗ್ನೇಯದಲ್ಲಿ ಹೊಲದ ಬದಿಗಳ ಮೇಲೆ ಆರು ಮೈಲಿ ದೂರ ನಡೆದರೆ ತಿರುವಾಲಿ–ತಿರುನಗರಿ ಎನ್ನುವ ಜೋಡಿ ದಿವ್ಯ ಕ್ಷೇತ್ರಗಳು ಸಿಗುತ್ತವೆ. ತಿರುವಾಲಿಯಂದು ನರಸಿಂಹಸ್ವಾಮಿ ಸನ್ನಿಧಿ ಮತ್ತು ತಿರುನಗರಿಯಲ್ಲಿ ವಯಲಾಲಿ ಮಣವಾಳನ್ ಸನ್ನಿಧಿಗಳಿವೆ. ಇಲ್ಲಿನ ವೇಡುಪುರಿ ಉತ್ಸವವು ಅತ್ಯಂತ ವೈಭವದಿಂದ ನಡೆಯುತ್ತದೆ. ಪಂಗುನಿ ತಿಂಗಳಲ್ಲಿ ನಡೆಯುವ ದೇವರ ಕಲ್ಯಾಣೋತ್ಸವ ಉತ್ಸವದಂದು ರಾತ್ರಿ ಹನ್ನೊಂದು ಗಂಟೆಗೆ ಬಿಲ್ಲು ಬತ್ತಳಿಕೆ, ಮಶಾಪು ದೀವಟಿಗೆಗಳಿಂದ ತಿರುಮಂಗೈ ಆಳ್ವಾರ್‌ರವರು ಅಶ್ವಾರೂಢರಾಗಿ ಮಂತ್ರಿ ಸಹಿತರಾಗಿ ಬಂದು ಅರಳೀ ಮರದ ಹಿಂದೆ ನಿಂತು ದೇವರ ಹಾಗೂ ಲಕ್ಷ್ಮೀದೇವಿಯರ ತಿರುವಾಭರಣಗಳನ್ನು ಅಪಹರಿಸುವ ಸನ್ನಿವೇಶದಲ್ಲಿ ನಡೆಯುವ ಪ್ರಶ್ನೋತ್ತರಗಳು, ಸಮಸ್ಯೆಗಳಿಂದ ಕೂಡಿದ ಪಾಶುರಗಳ ರಾಗಯುಕ್ತ ಪಠನವು ಕರ್ಣ ನೇತ್ರಾನಂದಕರವಾಗಿರುತ್ತದೆ.

ಶೀರ್ಕಾಳಿಗೆ ಏಳು ಮೈಲಿ ದೂರದಲ್ಲಿ ತಿರುನಾಂಗೂರ್ ಇದೆ. ಬಹುಶಃ ಮುಂಚೆ ದೊಡ್ಡ ಪಟ್ಟಣವಾಗಿದ್ದಿರಬಹುದು. ಈಗ ಇದು ಸಣ್ಣ ಹಳ್ಳಿಯಾಗಿದೆ. ಇಲ್ಲಿ ಆರು ದಿವ್ಯಕ್ಷೇತ್ರಗಳಿವೆ.

ಮಣಿಮಾಡಕ್ಕೋಯಿಲ್ ಎನ್ನುವುದು ಮೊದಲನೆಯದು. ನಂದಾವಿಳಕ್ಕು ಪ್ಪೆರುಮಾಳ್, ನರನಾರಾಯಣರು, ಪುಂಡರೀಕವಲ್ಲಿ ತಾಯಾರ್‌ರವರುಗಳು ಇರುವ ಪ್ರಣವ ವಿಮಾನವನ್ನು ಹೊಂದಿರುವ ಇಲ್ಲಿನ ದೇವಾಲಯವು ಇಂದ್ರ ಪುಷ್ಕರಿಣಿ, ರುದ್ರ ಪುಷ್ಕರಿಣಿಗಳನ್ನು ಹೊಂದಿದೆ. ತೈ ಅಮಾವಾಸ್ಯೆಯಂದು ತಿರುನಗರಿಯಿಂದ ತಿರುಮಂಗೈ ಆಳ್ವಾರರು ಹೊರಟು, ತಿರುಕ್ಕುರೈಯಲೂರಿಗೆ ಹೋಗಿ ಪಂಚನರಸಿಂಹಮೂರ್ತಿಗಳನ್ನು ಸೇವಿಸಿ, ಆ ಆಳ್ವಾರರು ತದಿಯಾರಾಧನೆ ಮಾಡಿದ ಮಂಗೈಮಠಂಗೆ ನಂತರ ಹೋಗಿ, ಉತ್ತರ ದೇಶದ ದಿವ್ಯಕ್ಷೇತ್ರಗಳಿಗೆ ಮಂಗಳಾಶಾಸನ ಮಾಡಿ, ಬೇರೆ ದಿವ್ಯಕ್ಷೇತ್ರಗಳನ್ನು ದರ್ಶಿಸಿ ಮಂಜುಕ್ಕುಳಿಮಂಟಪಂ ಬಳಿ ತಿರುಮಂಜನ ಮಾಡಿಕೊಂಡ ನಂತರ, ಅಂದು ಸಾಯಂಕಾಲ ತಿರುನಾಂಗೂರ್‌ಗೆ ಬರುವರು. ಅಲ್ಲಿನ ಆರು ದಿವ್ಯಕ್ಷೇತ್ರಗಳಲ್ಲೂ ಮಂಗಳಾಶಾಸನ ಮಾಡುವರು. ಆ ನಂತರ ಮಾರನೆಯ ದಿನ 12 ಗರುಡ ಸೇವಾ ಮಹೋತ್ಸವವು ಜರುಗುತ್ತವೆ. ಇದು ಅತ್ಯಂತ ಭವ್ಯವಾದ ಉತ್ಸವವಾಗಿರುತ್ತದೆ. ಇದರ ವರ್ಣನೆ ಅಸಾಧ್ಯ.

ಮಣಿಮಾಡಕ್ಕೋಯಿಲ್‌ನಿಂದ ಅರ್ಧ ಮೈಲಿ ದೂರದಲ್ಲಿ ತಿರುನಾಂಗೂರಿನ ಎರಡನೆ ದಿವ್ಯಕ್ಷೇತ್ರವಾದ ತಿರುವೈಕುಂಠವಿಣ್ಣಗರಂ ಇದೆ. ಇಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿ ಮೂರನೆಯದಾದ ಅರಿಮೇಯ ವಿಣ್ಣಗರಂ ಇದೆ. ತಿರುನಾಂಗೂರಿಗೆ ಉತ್ತರದಲ್ಲಿ ಹೊಲಗಳ ಬದಿಗಳ ಮೇಲೆ ಹೋದರೆ ನಾಲ್ಕನೆಯದಾದ ತಿರುತ್ತೇವನಾರ್‌ತುಗೈ (ಕೀಳ್ಶಾಲೈ) ಇದೆ. ಇಲ್ಲಿಂದ ತುಸುವೇ ದೂರದಲ್ಲಿ ಐದನೆಯದಾದ ವಣ್ ಪುರುಷೋತ್ತಮಂ ಮತ್ತು ಆರನೆಯದಾದ ಶೆಂಬೊನ್ ಶೆಯ್ ಕೋಯಿಲ್

ಎನ್ನುವ ದಿವ್ಯಕ್ಷೇತ್ರಗಳಿವೆ. ಇದರೊಂದಿಗೆ ತಿರುತೆತ್ತಿಯಂಬಲಂ ಎನ್ನುವುದನ್ನೂ ಸೇರಿಸಲಾಗಿದೆ.

ತಿರುನಾಂಗೂರ್‌ಗೆ ಪೂರ್ವದಲ್ಲಿ ಒಂದು ಮೈಲಿ ದೂರದಲ್ಲಿ ತಿರುಮಣಿಕ್ಕೂಡಂ ಎನ್ನುವ ವಿಷ್ಣು ಕ್ಷೇತ್ರವಿದೆ. ಕನಕ ವಿಮಾನದಿಂದ ಕೂಡಿದ ಇಲ್ಲಿನ ದೇವಾಲಯದಲ್ಲಿ ಮಣಿಕ್ಕೂಡ ನಾಯಕ ಹಾಗೂ ತಿರುಮಾಮಗಳ್ ನಾಚ್ಚಾರವರುಗಳು ಇದ್ದಾರೆ. ಇಲ್ಲಿ ಚಂದ್ರ ಪುಷ್ಕರಿಣಿ ಇದೆ.

ತಿರುನಗರಿಗೆ ದಕ್ಷಿಣದಲ್ಲಿ 1½ ಮೈಲಿ ದೂರ ಕಾಲುದಾರಿಯಲ್ಲಿ ಹೋದರೆ ಕಾವಳಂಬಾಡಿ ಎನ್ನುವ ದಿವ್ಯಕ್ಷೇತ್ರ ದೊರೆಯುತ್ತದೆ. ಇಲ್ಲಿ ಗೋಪಾಲಕೃಷ್ಣಪ್ಪೆರುಮಾಳ್, ಮಡವರಲ್ ಮಂಗೈ ನಾಚ್ಚಿಯಾರ್, ಶೆಂಗಮಲವಲ್ಲಿ ನಾಚ್ಚಾರ್‌ರವರು, ಸ್ವಯಂಭೂ ವಿಮಾನದ ಹಾಗೂ ತಡಮಲರ್ ಪೊಯ್‌ಗೈ ತೀರ್ಥಗಳಿಂದ ಕೂಡಿದ ದೇವಾಲಯದಲ್ಲಿ ನಿವಸಿತರಾಗಿದ್ದಾರೆ. ಈ ದಿವ್ಯದೇಶದ ಪಶ್ಚಿಮಕ್ಕೆ ಎರಡು ಫರ್ಲಾಂಗ್ ದೂರದಲ್ಲಿ ತಿರುಮಂಗೈ ಆಳ್ವಾರ್‌ರವರು ತದೀಯಾ ರಾಧನೆ ಮಾಡಿದ ವೀರ ನರಸಿಂಹ ಸ್ವಾಮಿ ಸನ್ನಿಧಿ ಇರುವ ಮಂಗೈ ಮಠವಿದೆ.

ತಿರುನಾಂಗೂರ್‌ಗೆ ದಕ್ಷಿಣದಲ್ಲಿ ಕಾಲುದಾರಿಯಲ್ಲಿ ಎರಡು ಮೈಲಿಗಳ ದೂರದಲ್ಲಿ ತಿರುಪಾರ್ಥಾನ್ ಪಳ್ಳಿ ಎನ್ನುವ ದಿವ್ಯಕ್ಷೇತ್ರವಿದೆ. ಯಾವ ಅನುಕೂಲವೂ ಇಲ್ಲದ ಇಲ್ಲಿಗೆ ಹೋಗುವುದೆ ಒಂದು ಕಷ್ಟ. ತಾಮರೈಯಾಳ್, ಕೇಳ್ವಪ್ಪೆರುಮಾಳ್, ತಾಮರೈ ನಾಯಕಿಯರಿಂದ ಕೂಡಿದ ಈ ದೇವಾಲಯವು ನಾರಾಯಣ ವಿಮಾನ ಹಾಗೂ ಶಂಖ ಸರಸ್ಸುಗಳನ್ನು ಹೊಂದಿದೆ.

## ಇತರೆಯವು :

ನಾಗಪಟ್ಟಣದಿಂದ ಒಂದು ಮೈಲಿ ದೂರದಲ್ಲಿ ತಿರುನಾಗೈ ಎನ್ನುವ ದಿವ್ಯಕ್ಷೇತ್ರವಿದೆ. ಸೌಂದರ್ಯ ಪ್ಪೆರುಮಾಳ್, ಸೌಂದರ್ಯವಲ್ಲಿ ತಾಯಾರ್‌ರಿಂದ ಕೂಡಿದ ಈ ದೇವಾಲಯವು ಸೌಂದರ್ಯ ವಿಮಾನವನ್ನು ಹೊಂದಿದ್ದು, ಸಾರ ಪುಷ್ಕರಿಣಿಯನ್ನು ಹೊಂದಿದೆ.

ಚಿದಂಬರಂ ಶಿವ ಹಾಗೂ ವಿಷ್ಣುಕ್ಷೇತ್ರ ಎರಡೂ ಆಗಿದೆ. ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತ ಪ್ರಚಾರದಲ್ಲಿ ಪರೋಕ್ಷವಾಗಿ ಸಹಾಯ ಮಾಡಿದ ತಿಲ್ಲೈ ಮೋಹನಾಂಬಾಳ್ ನರ್ತಕಿಯ ನೆನಪಿಗಾಗಿ 'ತಿಲ್ಲೈ ಚಿದಂಬರಂ' ಎಂದಾಗಿದೆ. ಇದನ್ನು 'ತಿರುಚ್ಚಿತ್ರಕೂಟಂ' ಎಂದೂ ಕರೆಯುತ್ತಾರೆ. ಇಲ್ಲಿನ ಗೋವಿಂದರಾಜ ಪ್ಪೆರುಮಾಳ್, ಪುಂಡರೀಕವಲ್ಲಿ ತಾಯಾರ್‌ರವರಿಂದ ಕೂಡಿದ ದೇವಾಲಯವು ಸಾತ್ವಿಕ ವಿಮಾನ ಹಾಗೂ ಪುಂಡರೀಕ ಸರಸ್ಸುಗಳನ್ನು ಹೊಂದಿದೆ.

ತಿರುವಾರೂರ್‌ಗೆ ಪೂರ್ವದಲ್ಲಿ ಎಂಟು ಮೈಲಿ ದೂರದಲ್ಲಿ ಕೀವಳೂರ್ ಸ್ಟೇಷನ್ನಿನಿಂದ ಪೂರ್ವಕ್ಕೆ ಕಾಲುದಾರಿಯಲ್ಲಿ ಎರಡು ಮೈಲಿ ದೂರದಲ್ಲಿ ತಿರುಕ್ಕಣ್ಣಂಗುಡಿ ಎನ್ನುವ ದಿವ್ಯಕ್ಷೇತ್ರವಿದೆ. ಶ್ರೀ ರಂಗಧಾಮನ ಕೈಂಕರ್ಯಕ್ಕಾಗಿ ನಾಗಪಟ್ಟಣದಿಂದ ತಂದ ಬೌದ್ಧ ಸ್ವರ್ಣ ವಿಗ್ರಹವನ್ನು ಒಂದು ಹೊಲದಲ್ಲಿ ತಿರುಮಂಗೈ ಆಳ್ವಾರರು ಬಚ್ಚಿಟ್ಟಿರಲು, ಅವರಿಗೂ ಹಾಗೂ ಹೊಲದ ಯಜಮಾನನಿಗೂ ವಾದವಿವಾದಗಳು ರಾತ್ರಿಯವರೆಗೂ ನಡೆದುದ್ದರಿಂದ ಇದಕ್ಕೆ ತೀರಾವಷಕ್ಕು ಎಂದೂ ಹೆಸರಾಗಿದೆ. ನಂತರ ದೇವರ ಆಜ್ಞೆಯ ಮೇರೆಗೆ ತಿರುಮಂಗೈ ಆಳ್ವಾರರು ತಮ್ಮ ಕೈಯ್ಯಿಂದ ಬೀಸಿದ ಕಲ್ಲು ಬಿದ್ದ ಸ್ಥಳದಲ್ಲಿ ಸಿಹಿನೀರಿನ ಚಿಲುಮೆ ಉದ್ಭವವಾಯಿತು. ಇದರ ವಿನಹ ಇಲ್ಲಿ ಬೇರೆಲ್ಲೂ ಸಿಹಿನೀರಿಲ್ಲ.

ತಿರುವಾರೂರ್‌ಗೆ ಪಶ್ಚಿಮದಲ್ಲಿ ಕುಳಕ್ಕರೈ ಸ್ಟೇಷನ್ನಿಗೆ ವಾಯುವ್ಯದಲ್ಲಿ ಎರಡು ಮೈಲಿ ದೂರದಲ್ಲಿನ ಅಮ್ಮೈಯಪ್ಪನ್‌ಗೆ ಪೂರ್ವದಲ್ಲಿ ಒಂದೂವರೆ ಮೈಲಿ ದೂರದಲ್ಲಿ ತಿರುಕ್ಕಣ್ಣಮಂಗೈ ಎನ್ನುವ ದಿವ್ಯಕ್ಷೇತ್ರವಿದೆ. ಭಕ್ತವತ್ಸಲ ಪ್ಪೆರುಮಾಳ್, ಅಭಿಷೇಕವಲ್ಲಿ ತಾಯಾರ್, ಉತ್ಪಲ ವಿಮಾನ, ದರ್ಶನ ಪುಷ್ಕರಿಣಿಗಳಿರುವ ಈ ದೇವಾಲಯದ ಗರ್ಭಗೃಹದಲ್ಲಿ ಎಷ್ಟೋ ವರ್ಷಗಳಿಂದ ಜೇನುಗೂಡೂ ಇದೆ. ಇದಕ್ಕೂ ಪೂಜೆ ಮಾಡಲಾಗುತ್ತದೆ. ಇಲ್ಲಿನ ದೇವರನ್ನು ಆರಾಧಿಸಲು ಋಷಿಗಳು ಈ ರೂಪದಲ್ಲಿ ಇರುತ್ತಾರೆ ಎಂಬ ನಂಬಿಕೆ.

ತಿರುಕ್ಕಣ್ಣಪುರಂ, ತಿರುವೆಳ್ಳಿಕ್ಕುಳಂ ಮತ್ತು ತಿರುವೆಳ್ಳಿಯಂಗಡಿ – ಎನ್ನುವವು ಚೋಳನಾಡಿನ ಉಳಿದ ಮೂರು ದಿವ್ಯಕ್ಷೇತ್ರಗಳು.

ಶ್ರೀ ವೈಷ್ಣವ ಸಿದ್ಧಾಂತದ ಆಳ್ವಾರರು ಮಂಗಳಾ ಶಾಸನ ಮಾಡಿರುವುದು ಮಹಾ ವಿಷ್ಣುವಿನ 108 ದಿವ್ಯಕ್ಷೇತ್ರಗಳಲ್ಲಿ. ಅವುಗಳಲ್ಲಿ ಮೇಲೆ ತಿಳಿಸಿದವುಗಳು 40 ಕ್ಷೇತ್ರಗಳ ಸಾಮಾನ್ಯ ವಿವರಗಳು.

———

(21ನೇ ಪುಟದಿಂದ)

ಹೊಂದಿದೆ. ದಕ್ಷಿಣ ಕನ್ನಡ ಜಿಲ್ಲೆಯ ಮಹಾಗಣಪತಿ ಕ್ಷೇತ್ರದ ಪರಿಚಯ: ಎಸ್. ರಾಮಕೃಷ್ಣ ಶಾಸ್ತ್ರಿಗಳಿಂದಾಗಿದೆ. ಹರಿದಾಸ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆಯ ಬಗ್ಗೆ ರುಕ್ಮಿಣಿಗಿರಿಮಾಜಿ ಬೆಳಕು ಬೀರಿದ್ದಾರೆ.

ತಿರುಪತಿ ದೇವಸ್ಥಾನದ ಮಾಸಪತ್ರಿಕೆ ಸಪ್ತಗಿರಿಯ ಉಗಮ ಬೆಳವಣಿಗೆಗಳನ್ನು ಅದರ ಸಂಪಾದಕ ಕೆ. ಸುಬ್ಬರಾಯರ ಲೇಖನ ಮಾಡಿಕೊಡುತ್ತದೆ. ದೀನಬಂಧು ವಿ. ಆರ್. ನಾಯ್ಡು ಅವರು ತಿರುಪತಿಯ ವೈಭವಕ್ಕೆ ಕನ್ನಡಿಗರ ಕೊಡುಗೆ ಎಂಬ ಲೇಖನದಲ್ಲಿ ಯಾತ್ರಿಕರ ಸೌಕರ್ಯಗಳಿಗಾಗಿ ಕರ್ನಾಟಕವು ಕೈಗೊಂಡಿರುವ ಕಾರ್ಯಗಳನ್ನು ವಿವರಿಸಿದ್ದಾರೆ. ಮಣಿಗನಹಳ್ಳಿ ಸತ್ಯ ಅವರು ಪುರಂದರರು ಕಂಡ ಶ್ರೀನಿವಾಸನನ್ನು ಪರಿಚಯಿಸಿದರೆ, ಎಸ್. ಆರ್. ಚಂದ್ರಶೇಖರರು ತಿರುಮಲೆಯಲ್ಲಿರುವ ಕರ್ನಾಟಕ ಸತ್ರವನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಶ್ರೀ ವರದರಾಜಯ್ಯಂಗಾರ್ಯರು ಕಳಲೆ ಶ್ರೀ ಲಕ್ಷ್ಮೀಕಾಂತಸ್ವಾಮಿ ಹಾಗೂ ತಿರುಪತಿ ಶ್ರೀನಿವಾಸ ಎಂಬ ಲೇಖನದಲ್ಲಿ ಕರ್ನಾಟಕಕ್ಕೂ ತಿರುಪತಿಗೂ ಇರುವ ಅನನ್ಯ ಸಂಬಂಧವನ್ನು ತಿಳಿಸಿದ್ದಾರೆ. ಶ್ರೀ ವಿರೂಪಾಕ್ಷ ವಿದ್ಯಾರಣ್ಯ ಪೀಠಾಧಿಪತಿಗಳು ಅನ್ನಮಾಚಾರ್ಯರು ಕಂಡ ಶ್ರೀನಿವಾಸನನ್ನು ಕುರಿತು ಬರೆದಿದ್ದಾರೆ.

ಶ್ರೀ ಎಂ. ಮುರಳೀಮಾಧವಶರ್ಮ, ಶ್ರೀ ಅ. ಬ. ರಂಗಸ್ವಾಮಿ ಭಟ್ಟ ಶ್ರೀ ಎಚ್. ವಿ. ಕೇಶವಾಚಾರ್ಯ, ಶ್ರೀ ಬಿ. ಷಣ್ಮುಖಾಚಾರ್ಯ ಅವರುಗಳ ಲೇಖನಗಳೂ ಗಮನಾರ್ಹ.

ಇಂಗ್ಲೀಷ್, ಹಿಂದಿ, ಸಂಸ್ಕೃತ ಲೇಖನಗಳನ್ನು ಒಳಗೊಂಡಿರುವ ಅಚ್ಚುಕಟ್ಟಾದ ಮುದ್ರಣದ ಈ ಪುಸ್ತಕ ಸಂಗ್ರಹ ಯೋಗ್ಯವಾದದ್ದು.

**- ನುಗ್ಗೆಹಳ್ಳಿ ರಂಗನಾಥ್**

———

# ಶ್ರೀಮಜ್ಜಯತೀರ್ಥರು

ದ್ವೈತಮತ ಪ್ರತಿಷ್ಠಾಪನಾಚಾರ್ಯರು– ಶ್ರೀ ಮಧ್ವರು. ಅವರು ತಮ್ಮ ಮೂಲ ಮುವತ್ತೇಳು ಗ್ರಂಥಗಳಲ್ಲಿ ದ್ವೈತಮತದ ತತ್ತ್ವಗಳನ್ನು ಹೇಳಿದ್ದಾರೆ. ಅವರು ಹೇಳುವ ಮುಖ್ಯ ತತ್ತ್ವಗಳೆಂದರೆ:– ಶ್ರೀಹರಿಯು ಸರ್ವೋತ್ತಮನು. ಜಗತ್ತು ಸತ್ಯವು. ಪಂಚಭೇದತಾರತಮ್ಯ ಅವಶ್ಯ. ಜೀವಿಗಳಲ್ಲಿ– ಸತ್ವ, ರಜ, ತಮೋಜೀವಿಗಳಿದ್ದಾರೆ. ಸ್ವಸ್ವರೂಪಾನಂದವೇ ಮೋಕ್ಷವು. ಜೀವೇಶ್ವರ ಭೇದವು ಮೋಕ್ಷದಲ್ಲಿಯೂ ಇದೆ. ಜೀವನು ಮೋಕ್ಷಪಡೆಯಬೇಕಾದರೆ–ಭಕ್ತಿ–ಜ್ಞಾನ ವೈರಾಗ್ಯದಿಂದ ಶ್ರೀಹರಿಯ ಕೃಪೆಯನ್ನು ಪಡೆಯಬೇಕಾಗುತ್ತದೆ. ಈ ಭೂಮಿಯ ಮೇಲೆ ದ್ವೈತ ತತ್ತ್ವಜ್ಞಾನವು ಬೆಳೆದು ನಿಂತಿದೆ.

ಶ್ರೀ ಮಧ್ವಾಚಾರ್ಯರ ಪರಂಪರೆಯಲ್ಲಿ ಅನೇಕ ಯತಿಗಳು ಆಗಿ ಹೋಗಿದ್ದಾರೆ. ಇವರಲ್ಲಿ ಮೂವರು ಬಹಳ ಪ್ರಸಿದ್ಧರು. ಅದನ್ನು ಒಂದು ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ :–

ಶ್ರೀ ಮಧ್ವಃ ಕಲ್ಪವೃಕ್ಷಶ್ಚ
ಜಯಾರ್ಯಃ ಸುರಧೇನವಃ
ಚಿಂತಾಮಣಿಸ್ತು ವ್ಯಾಸಾರ್ಯಾಃ
ಮುನಿತ್ರಯಮುದಾಹೃತಃ ॥

ಈ ಶ್ಲೋಕದಲ್ಲಿ ಬರುವ ಮುಖ್ಯ ವಿಷಯವೆಂದರೆ– ಜಯತೀರ್ಥರು ಮಧ್ವರಿಂದ ಎರಡನೇಯವರು. ಅಂದರೆ ಬಹಳ ಮಹತ್ವದ ಕಾರ್ಯ ಮಾಡಿದವರು ಎಂಬು ತಿಳಿದು ಬರುತ್ತದೆ. ಮಧ್ವರ ಪರಂಪರೆಯಲ್ಲಿ ಬರುವ ಅಕ್ಷೋಭ್ಯ ತೀರ್ಥರು – ವಿದ್ಯಾರಣ್ಯರ ಸಮಕಾಲೀನರು. ಅಕ್ಷೋಭ್ಯರ ಶಿಷ್ಯರೇ ಜಯತೀರ್ಥರು. ಈ ಹಿನ್ನೆಲೆಯಲ್ಲಿ ಜಯತೀರ್ಥರ ಕಾರ್ಯದ ಮಹತ್ವವನ್ನು ನಾವು ಗುರುತಿಸಬೇಕು. ಜಯತೀರ್ಥರು 14 ನೇ ಶತಮಾನದ ಕೊನೆಯ ಭಾಗದಲ್ಲಿ ಇದ್ದರೆಂಬುದು ತಿಳಿದು ಬರುತ್ತದೆ. ಇನ್ನು ಇವರ ಜೀವನ ಚರಿತ್ರೆಯನ್ನು ಗುರುತಿಸಬೇಕು.

ಜಯತೀರ್ಥರ ಬಗ್ಗೆ ಹೇಳುವಾಗ ಮೂರು ಜನ್ಮದ ವಿಚಾರ ಹೇಳುತ್ತಾರೆ. ಇವರು ಇಂದ್ರಾಂಶ ಸಂಭೂತರು. ಮಹಾಭಾರತದ ಕಾಲದಲ್ಲಿ ಅರ್ಜುನನಾಗಿ ಅವತರಿಸಿದ್ದರು. ಆಗ ವಾಯುದೇವರು ಭೀಮಸೇನರಾಗಿ ಅವತರಿಸಿದ್ದರು. ಮಹಾಭಾರತ ಯುದ್ಧವಾಗಿ–ಪಾಂಡವರು ರಾಜ್ಯವಾಳುತ್ತಿದ್ದಾಗ ಒಂದು ದಿನ ಅರ್ಜುನನಿಗೂ ಭೀಮಸೇನನಿಗೂ ವಾಗ್ವಾದವಾಯಿತು. ಅರ್ಜುನನು ಮಹಾಭಾರತದ ಯುದ್ಧವನ್ನು ಜಯಿಸುವುದಕ್ಕೆ ತಾನೇ ಕಾರಣನೆಂದು ಗರ್ವದಿಂದ ನುಡಿದಾಗ ಭೀಮಸೇನನು–'ನಮ್ಮ ಜಯಕ್ಕೆ ಕಾರಕ ಶ್ರೀಕೃಷ್ಣಪರಮಾತ್ಮನೆಂದು' ಹೇಳಿದರೂ ಅರ್ಜುನನ ಅಜ್ಞಾನ ತೊಲಗಲಿಲ್ಲ. ಆಗ ಭೀಮಸೇನನು 'ನೀನು ಪಶುವು' ಎಂದನಂತೆ, ಆ ಕಾರಣಕರ್ತ್ತಾಗಿಯೇ ಕಲಿಯುಗದಲ್ಲಿ ಅರ್ಜುನನು ಎತ್ತಾಗಿ ಭೂಮಿಗೆ ಬಂದ. ಭೀಮಸೇನ ಮಧ್ವರಾಗಿ ಅವತರಿಸಿ–ದ್ವೈತಮತ ಪ್ರತಿಷ್ಠಾಪನೆಯ ಕಾರ್ಯ ಕೈಕೊಂಡು – ಗ್ರಂಥಗಳನ್ನು ರಚಿಸಿದ. ಎತ್ತಾಗಿ ಹುಟ್ಟಿದ – ಅರ್ಜುನ – ಮಧ್ವರ ಗ್ರಂಥಗಳನ್ನು ಹೊತ್ತುಕೊಂಡು ಹೋಗುವ ಕಾರ್ಯ ಮಾಡಬೇಕಾಯಿತು. ಪಾಠ ಪ್ರವಚನವನ್ನು ಈ ಎತ್ತು ಮನಗೊಟ್ಟು ಕೇಳುತ್ತಿತ್ತಂತೆ, ಈ ಎತ್ತಿಗೆ ಮತ್ಸರಿಗಳಾದ ಪಂಡಿತರುಗಳಿಂದ ವಿಷಪ್ರಯೋಗವಾಯಿತಂತೆ. ಆಗ ಮಧ್ವರು ದ್ವಾದಶ ಸ್ತೋತ್ರವನ್ನು ಹೇಳಿ ಆ ಎತ್ತನ್ನು ಬದುಕಿಸಿದರು. ಬಳಿಕ ಆ ಎತ್ತು ಮಂಗಳವೇಢೆಯ ದೇಶಪಾಂಡೆ ರಘುನಾಥ ರಾಯರ ಮಗನಾಗಿ ಅವತರಿಸಿತು. ಹೀಗೆ ಮೂರು ಜನ್ಮದ ಕಥೆ ಬರುತ್ತದೆ.

ಮಂಗಳವೇಢೆ ಗ್ರಾಮವು ಪಂಢರಪುರದ ಸಮೀಪದಲ್ಲಿದೆ. ರಘುನಾಥ ದೇಶಪಾಂಡೆಯವರು ಆಗರ್ಭ ಶ್ರೀಮಂತರು ಅವರ ಪತ್ನಿ ಸಖೂಬಾಯಿ ಪಂಢರಪುರದ ವಿಠಲನ ಪರಮ ಭಕ್ತಳು. ಈ ದಂಪತಿಗಳಲ್ಲಿ ಧೋಂಡೋಪಂತ ಹುಟ್ಟಿದರು. ಇವರು ಬೆಳೆದು ದೊಡ್ಡವರಾದರು. ಅವರು ಒಳ್ಳೆ ಯೋಧರು, ಕತ್ತಿವರಸೆಗಾರರು, ಶ್ರೇಷ್ಠ ಕುದುರೆ ಸವಾರರಾಗಿದ್ದರು. ಅವರ ತಂದೆಯವರು ತಮ್ಮ ಅಂತಸ್ತಿಗೆ ತಕ್ಕಂತಹ ಕನ್ನೆಯರನ್ನು ನೋಡಿ ಮದುವೆ ಮಾಡಿದರು. ಆದರೆ ಅದು ಆದದ್ದೇ ಬೇರೆ.

ಇತ್ತ ಅಕ್ಷೋಭ್ಯತೀರ್ಥರು – ತಮ್ಮ ಮುಂದಿನ ಶಿಷ್ಯನಿಗಾಗಿ ವಿಚಾರಿಸುತ್ತಿದ್ದಾಗ – ಮಧ್ವರು ಅವರಿಗೆ ಸ್ವಪ್ನದಲ್ಲಿ ಹೀಗೆ ಹೇಳಿದರಂತೆ :–

'ಊಢಃ ಸತ್ತುರಗಂ ಪಿಪಾಸುರುದಕಂ–
ಗೌರ್ವತ್ಪಿಬನ್ನಾಸ್ಥಿತಃ
ಶಿಷ್ಯಸ್ತೇ ಭವಿತಾಸ್ಮಿ ಪೂರಾರ್ಜುನವತ್
ದ್ರೋಣಸ್ಯ ತಸ್ಮಾದೃಶಃ ॥

ಈ ನುಡಿಯನ್ನಾಲಿಸಿ ಅಕ್ಷೋಭ್ಯರು ತಮ್ಮ ಶಿಷ್ಯನ ಬರವಿಗಾಗಿ ನದಿಯ ದಡದಲ್ಲಿ ಕಾಯುತ್ತಿದ್ದರಂತೆ! ಭೀಮೆಯು ಗರ್ಜಿಸುತ್ತ ಬಹುವೇಗವಾಗಿ ಪ್ರವಹಿಸುತ್ತಿತ್ತಂತೆ. ಅದು ಮಧ್ಯಾಹ್ನದ ಸಮಯ– ಬಿಸಿಲಿನ ಬೇಗೆ ಹೆಚ್ಚಾಗಿತ್ತು. ಅಷ್ಟರಲ್ಲಿಯೇ ನಾಲ್ಕಾರು ಕುದುರೆ ಸವಾರರು ವೇಗವಾಗಿ ನದಿಯ ದಡಕ್ಕೆ ಬಂದರು. ಅವರಲ್ಲೊಬ್ಬ ಕುದುರೆಯನ್ನು ನದಿಯಲ್ಲಿ ದುಮುಕಿಸಿದ ಬಾಯಿ ಹಚ್ಚಿ ನೀರನ್ನು ಕುಡಿದ, ಅದನ್ನು ಅಕ್ಷೋಭ್ಯರು ನೋಡಿದರು. ಅವನೇ ತಮ್ಮ ಶಿಷ್ಯನೆಂದು ಬಗೆದು ಕೂಗಿ ಅವನನ್ನು ಕರೆದರು. ಧೋಂಡೋಪಂತರು ಸ್ವಾಮಿಗಳಿಗೆ ನಮಸ್ಕರಿಸಿದರು. ಆಗ ಸ್ವಾಮಿಗಳು ಅವರಿಗೆ–

ಶ್ರೀ ಬಿ. ಆರ್. ವಾಡಪ್ಪಿ

'ಕಿಂ ಪಶುಃ ಪೂರ್ವದೇಹೇ'? ಎಂದರಂತೆ. ಅವರ ಆ ವಾಣಿಯು ಧೋಂಡೋ ಅವರನ್ನು ಎಚ್ಚರಿಸಿತಂತೆ–ಅವರಿಗೆ ಹೀಗೆ ಮಧ್ವರ ವಾಣಿಯು ಕೇಳಿಸಿದಂತಾಯಿತು :–

ಕುರು ಭುಂಕ್ಷ್ವ ಚ ಕರ್ಮ ನಿಜಂ ನಿಯತಂ
ಹರಿಪಾದ ವಿನಮ್ರಧಿಯಾ ಸತತಮ್ ।
ಹರಿರೇವ ಪರೋ ಹರಿರೇವ ಗುರುಃ
ಹರಿರೇವ ಜಗತ್ಪಿತೃ ಮಾತೃ ಗತಿಃ ॥

ಪೂರ್ವ ಜನ್ಮದಲ್ಲಿ ಮಧ್ವಾಚಾರ್ಯರು ಇದೇ ವಾಣಿಯಾಗಿ ತಮ್ಮನ್ನು ಬದುಕಿಸಿದ ವಿಷಯ ಜ್ಞಾಪಕವಾಯಿತು. ಧೋಂಡೋಪಂತರು, ಅಕ್ಷೋಭ್ಯರಿಗೆ ದೀರ್ಘದಂಡ ಪ್ರಣಾಮಹಾಕಿ– ಸನ್ಯಾಸಕೊಡಲು ಪ್ರಾರ್ಥಿಸಿಕೊಂಡರು. ಇದು ಅವರ ಜೀವನದಲ್ಲಿಯ ಒಂದು ತಿರುವು; ಸನ್ಯಾಸ ಸ್ವೀಕರಿಸಿದ್ದಾಯಿತು. ಈ ವಿಷಯ ಅವರ ತಂದೆ– ರಘುನಾಥರಾಯನಿಗೆ ತಿಳಿಯಿತು. ಅವರು ಗಾಬರಿಗೊಂಡು ಬಂದು ಅಕ್ಷೋಭ್ಯರಿಗೆ ತಮಗೆ ಇವನೊಬ್ಬನೇ ಮಗನೆಂದು ಹೇಳಿಮರಳಿ ಮಗನನ್ನು ಮನೆಗೆ ಕರೆದೊಯ್ದರು. ಆದದ್ದೇನು? ಏಕಾಂತ ಸೇವೆಗಾಗಿ ಮಡದಿ ಶಯ್ಯಾಗಾರ ಪ್ರವೇಶಿಸಿದಾಗ ಅಲ್ಲಿ ಕಂಡದ್ದೇನು? ಮಂಚದ ಮೇಲೆ ಘಟಸರ್ಪ! ಗಾಬರಿಗೊಂಡು ಅವರು ಮೂರ್ಛೆಹೋದಾಗ ರಘುನಾಥರಾಯರು ಈ ದೃಶ್ಯಕಂಡು 'ಮಹಾತ್ಮನೇ–ನೀನಾರೋ ನಾನು ತಿಳಿಯೆ– ನೀನು ಸನ್ಯಾಸ ಸ್ವೀಕರಿಸು' ಎಂದಾಗ ಜಯತೀರ್ಥರು 'ನಿಮಗೆ ಇನ್ನೊಬ್ಬ ಮಗ ಜನಿಸುವ, ಚಿಂತಿಸಬೇಡಿರಿ' ಎಂದು ಹೇಳಿ ಅಕ್ಷೋಭ್ಯತೀರ್ಥರ ಕಡೆಗೆ ನಡೆದರು.

ಅಕ್ಷೋಭ್ಯತೀರ್ಥರು – ಅವರಿಗೆ ಜಯತೀರ್ಥರೆಂದು ನಾಮಕರಣ ಮಾಡಿ – ತಮ್ಮ ಮಠದ ಪರಂಪರೆಯನ್ನು ಕಾಯ್ದುಕೊಂಡು ಹೋಗುವಂತೆ ಅವರನ್ನು ಅನುಗ್ರಹಿಸಿದರು ಬಳಿಕ ಜಯತೀರ್ಥರು ಮಧ್ವರ ಗ್ರಂಥಗಳಿಗೆ ಟೀಕೆಗಳನ್ನು ಬರೆಯಲು ಪ್ರಾರಂಭಿಸಿದರು. ಇವರ ಕಾಲದಲ್ಲಿಯೂ ಮಹಾಮೇಧಾವಿಗಳಾದ ವಿದ್ಯಾರಣ್ಯಸ್ವಾಮಿಗಳು ಇದ್ದರು. ಜಯತೀರ್ಥರಿಗೂ ಹಾಗೂ ವಿದ್ಯಾರಣ್ಯರಿಗೂ ಯರಗುಳವೆಂಬ ಗ್ರಾಮದಲ್ಲಿ ವಾಗ್ವಾದವಾಯಿತಂತೆ. ವಿದ್ಯಾರಣ್ಯರು ಅವರ ವಾದ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಸರಣಿಗೆ ಮೆಚ್ಚಿಕೊಂಡರೆಂದು ಹೇಳಲಾಗುತ್ತದೆ. ಜಯತೀರ್ಥರು ೨೩ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಶ್ರೀಮನ್‌ನ್ಯಾಯಸುಧಾ ಅತ್ಯಂತ ಮಹತ್ವದ ಗ್ರಂಥವಾಗಿದೆ. ಮಧ್ವಾಚಾರ್ಯರ ಅಣುವ್ಯಾಖ್ಯಾನಕ್ಕೆ ಇದು ಟೀಕಾಗ್ರಂಥವಾಗಿದೆ. ಜಯತೀರ್ಥರ ವಿಷಯ ಪ್ರತಿಪಾದನೆಯ ಕೌಶಲ್ಯ ಸುಲಲಿತಶೈಲಿ ಮೆಚ್ಚುವಂಥಹದು. ಈಗಲೂ ಸುಧಾಗ್ರಂಥವನ್ನು ಪಠನಮಾಡಿದವರ ಬಗ್ಗೆ ಒಂದು ಹೇಳಿಕೆ ಪ್ರಚಾರದಲ್ಲಿದೆ. 'ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ' ಅಂದರೆ – ಸುಧಾ ಪಠನಮಾಡುವದೂ – ವಸುಧೆಯನ್ನು ಪಾಲಿಸುವದು – ಸರಿ. ಇದು ನಿಜಕ್ಕೂ ಒಪ್ಪಬೇಕಾದ ಸಂಗತಿಯಾಗಿದೆ.

ಜಯತೀರ್ಥರು ಆಗಿನ ಕಾಲದ ಪದ್ಧತಿಯಂತೆ ದೇಶ ಸಂಚಾರಮಾಡಿ ಅನೇಕ ವಿದ್ವಾಂಸರೊಡನೆ ವಾಗ್ವಾದ ಮಾಡಿ ಜಯಿಸಿದರೆಂಬುವ ಮಾತನ್ನು ಮರೆಯುವಂತಿಲ್ಲ. ಅವರು ಒಮ್ಮೆ ಸಂಚಾರಮಾಡುತ್ತ ಈಗಿನ ಅಹಮದಾಬಾದಿಗೆ ಬಂದರು. ಅಲ್ಲಿ ಒಂದು ಬೌದ್ಧ ವಿಶ್ವವಿದ್ಯಾಲಯವಿತ್ತು. ಜಯತೀರ್ಥರು ಅಲ್ಲಿರುವ ಗ್ರಂಥ ಭಂಡಾರವನ್ನು ನೋಡಲು ಇಚ್ಛಿಸಿದರು. ಆದರೆ ಅವರು ಒಪ್ಪದಾಗಲು ಅವರೊಡನೆ ವಾಗ್ವಾದಕ್ಕಿಳಿದು ಅವರನ್ನು ಜಯಿಸಿ – ಅಲ್ಲಿಯ ದೊರೆ ಶ್ರೀರಾಮನ ಇಚ್ಛೆಯ ಮೇರೆಗೆ ಆ ಗ್ರಂಥಭಂಡಾರವನ್ನು ಪ್ರವೇಶಿಸಿದರು. ಮುಂದೆ ಅವರು ಕೊಲ್ಹಾಪುರಕ್ಕೆ ಬಂದರು. ಅಲ್ಲಿ ಪಂಚಗಂಗಾ ತೀರದಲ್ಲಿರುವ ವಿದ್ಯಾರಣ್ಯ ಮಠಕ್ಕೆ ಆಗಮಿಸಿ ಪಂಡಿತರೊಡನೆ ವಾಗ್ವಾದಮಾಡಿದರೆಂದು ತಿಳಿದು ಬರುತ್ತದೆ. ಹೀಗೆ ತಮ್ಮ ದ್ವೈತಮತ ಪ್ರಚಾರ ಮಾಡುತ್ತ ಈಗಿನ ಮಳಖೇಡ ಗ್ರಾಮಕ್ಕೆ ಬಂದರು. ಅಲ್ಲಿ ಅವರ ಪರಮ ಗುರುಗಳಾದ ಶ್ರೀ ಅಕ್ಷೋಭ್ಯತೀರ್ಥರ ವೃಂದಾವನವಿದೆ. ಇದರ ಮೊದಲ ಹೆಸರು ಮಾನ್ಯಖೇಟ. ಆ ಕನ್ನಡದ ದೊರೆ ನೃಪತುಂಗನು ಆಳಿಹೋದನು. ಅವನ ಕಾಲದ ಅನೇಕ ಐತಿಹಾಸಿಕ ಸ್ಥಳಗಳು ಅಲ್ಲಿ ಇವೆ. ಶ್ರೀ ಜಯತೀರ್ಥರಿಗೆ ಟೀಕಾಚಾರ್ಯರು ಎಂದೇ ಕರೆಯಲಾಗುತ್ತದೆ. ಇದಕ್ಕೆ ಮುಖ್ಯಕಾರಣ– ಅವರು ಅತ್ಯಂತ ಸುಂದರವಾದ ಶೈಲಿಯಲ್ಲಿ ತರ್ಕಬದ್ಧವಾದ ರೀತಿಯಿಂದ ಟೀಕೆಗಳನ್ನು ಬರೆದು ಪ್ರಸಿದ್ಧರಾಗಿರುವುದು, ಟೀಕಾಚಾರ್ಯರು ತಮ್ಮ ಕೊನೆಯ ದಿನಗಳನ್ನು ಮಳಖೇಡದಲ್ಲಿ ಕಳೆದರು. ಕೊನೆಗೆ ಆಷಾಢ ಬಹುಳ ಪಂಚಮಿಯಂದು ವೃಂದಾವನಸ್ಥರಾದರು. ಜಯತೀರ್ಥರು ತಮ್ಮ ಅಪ್ರತಿಮವಾದ ಪಾಂಡಿತ್ಯದಿಂದಲೂ ಹಾಗೂ ತಪಸ್ಸಿನಿಂದಲೂ– ಎಂದೂ ಮರೆಯಲಾರದ ಮಹಾಜೀವಿಗಳಾಗಿ ಮೆರೆಯುತ್ತಿದ್ದಾರೆ. ★



# ಗೃಹಲಕ್ಷ್ಮಿ





# ಕುರೂರಮ್ಮ

ಶ್ರೀಮತಿ ಸಿ. ಎಚ್. ಲಕ್ಷ್ಮಿ

ಯಶೋದೆಯಂತೆ ವಾತ್ಸಲ್ಯ ಭಾವದಿಂದ ಕೃಷ್ಣನನ್ನು ಆರಾಧಿಸಿ, ಪ್ರತ್ಯಕ್ಷವಾಗಿ ಲಾಲಿಸಿದ ಮಹಾ ಸ್ವಾಧ್ವಿ ಪರಮಭಕ್ತೆ ಕುರೂರಮ್ಮ (ಕುರೂರಂಬ) ಆಕೆ ಬಿಲ್ವಮಂಗಲರ ಸಮಕಾಲೀನೆ. ಗುರುವಾಯುಪುರೇಶನಾದ ಬಾಲಗೋಪಾಲನನ್ನು ಭಜಿಸಿ, ಪ್ರತ್ಯಕ್ಷ ಕಂಡು ಮುದ್ದಾಡಿದ ಧನ್ಯಾತ್ಮಳು – ಆಕೆ!

ಆ ಪುಣ್ಯವತಿಯು ಪರಯನ್ನೂರು ಮನೆತನದಲ್ಲಿ ಜನಿಸಿದಳು. ಚಿಕ್ಕಂದಿನಲ್ಲಿ ತಾಯಿ ಹೇಳಿದ್ದ, ಕೃಷ್ಣನ ಬಾಲಲೀಲೆಯ ಕಥೆಗಳು ಅವಳ ಮನಸ್ಸಿನಲ್ಲಿ ಬೇರೂರಿದ್ದುವು. ಒಮ್ಮೆ ಒಬ್ಬ ಸನ್ಯಾಸಿವರ್ಯರು ಅಲ್ಲಿಗೆ ಆಗಮಿಸಿದರು. ಆ ಬಾಲಕಿ ಆ ಪರಮಹಂಸರ ಪಾದಕ್ಕೆ ವಂದಿಸಿದಳು. “ದರ್ಶನಾದೇವ ಸಾಧವಃ” (ಸಜ್ಜನರ ದರ್ಶನದಿಂದಲೇ ಜೀವರು ಪುನೀತರಾಗುವರು) ಎಂಬ ಪ್ರಮಾಣದಂತೆ ಅವಳ ಮುಗ್ಧ ಕೋಮಲ ಹೃದಯದಲ್ಲಿ ಅಂಕುರಿಸಿದ್ದ ಕೃಷ್ಣ ಭಕ್ತಿ ಪಲ್ಲವಿಸಿತು.

ಕೋಮಳಂ ಕೂಜಯನ್ ವೇಣುಂ  
ಶ್ಯಾಮಳೋಽಯಂ ಕುಮಾರಕಃ ।  
ವೇದವೇದ್ಯಂ ಪರಂ ಬ್ರಹ್ಮ  
ಭಾಸತಾಂ ಪುರತೋ ಮಮ ॥

ಎಂಬ ದಿವ್ಯ ಶ್ಲೋಕದ ಗುರೂಪದೇಶವನ್ನು ಸ್ವೀಕರಿಸಿ, ನಿಧಿಯಂತೆ ಅದನ್ನು ತನ್ನ ಹೃದಯ ಜೋಪಾನವಾಗಿರಿಸಿಕೊಂಡಳು. ಕೃಷ್ಣನ ಆದಿವ್ಯ ಕೋಮಲ ಸ್ವರೂಪವನ್ನು ನೆನೆಯುತ್ತಾ, ನಾಮ ಕುಸುಮಗಳಿಂದ ಅರ್ಚಿಸುತ್ತಿದ್ದಳು. ಆ ಸನ್ಯಾಸಿವರ್ಯನ ಮುಖದಿಂದ ಕೃಷ್ಣನ ಬಾಲಲೀಲಾ ವರ್ಣನೆಗಳನ್ನು ಕೇಳಿ ಆಕರ್ಷಿತಳಾದಳು. ತಾನೂ ಯಶೋದೆಯಂತೆ ಕೃಷ್ಣನನ್ನು ಮುದ್ದಾಡಬೇಕು; ಅವನ ಲೀಲೆಗಳನ್ನು ಕಾಣುವಂತಾಗಬೇಕು ಎಂದು ಆಶಿಸುತ್ತಿದ್ದಳು.

ಆಕೆಯನ್ನು ಕುರೂರ್ ಮನೆತನಕ್ಕೆ ವಿವಾಹ ಮಾಡಿ ಕೊಡಲಾಯಿತು. ಆದರೆ ಅವಳ ದಾಂಪತ್ಯ ಜೀವನ ಬಹು ಸಮಯ ಸಾಗಲಿಲ್ಲ. ಸ್ವಲ್ಪ ಸಮಯದಲ್ಲೇ ಅವಳು ಬಾಲವಿಧವೆಯಾದಳು.

‘ಸರ್ವಾಃ ಸುಖ ಮಯಾ ದಿಶಃ’ ಎಂಬಂತೆ, ಯಾವ ಕಷ್ಟದಲ್ಲೂ ಎದೆಗುಂದದೆ, ಎಲ್ಲವನ್ನೂ ಪರಮ ಸುಖವೆಂಬಂತೆ ಸ್ವೀಕರಿಸುವುದು ಭಕ್ತರ ಸ್ವಭಾವವಷ್ಟೆ! ಭಕ್ತೆಯಾದ ಕುರೂರಂಬೆ ಈ ಘಟನೆಯ ನಂತರ ಕೃಷ್ಣ ಸ್ಮರಣೆಯಲ್ಲಿ ಮತ್ತಷ್ಟು ಮನಸ್ಸನ್ನು ನೆಟ್ಟಳು. ಭಕ್ತಿಯಿಂದ ಮನಃಪೂರ್ವಕವಾಗಿ ಆರಾಧಿಸತೊಡಗಿದಳು. ಸಜ್ಜನರನ್ನೇ ದೇವರ ಪ್ರತ್ಯಕ್ಷಸ್ವರೂಪವೆಂದು ಭಾವಿಸಿ ಆರಾಧಿಸುತ್ತಿದ್ದಳು.

ಅನೇಕ ಜನ್ಮಗಳಲ್ಲಿ ಆರ್ಜಿಸಿದ ಪುಣ್ಯಪ್ರಭಾದಿಂದಲೋ ಏನೋ ಕುರೂರಂಬೆಗೆ ಗೋಕುಲ ಬಾಲನಾದ ಶ್ರೀಕೃಷ್ಣನು ಪ್ರಸನ್ನನಾಗಿ, ಅವಳ ಸ್ವಂತ ಮಗನಂತೆ ಇದ್ದು ಪರಮಾನಂದವನ್ನುಂಟು ಮಾಡಿದನು. ಆಕೆ, ಸ್ವಂತ ಮಗನೆಂಬಂತೆ ಕೃಷ್ಣನನ್ನು ಗದರಿಸುತ್ತಲೂ, ಪ್ರೀತಿಯಿಂದ ಪೋಷಿಸುತ್ತಲೂ, ಬುದ್ಧಿವಾದ ಹೇಳುತ್ತಲೂ, ಆರೈಕೆ ಮಾಡುತ್ತಲೂ, ಮುದ್ದಾಡುತ್ತಲೂ, ಬಾಲಗೋಪಾಲನೊಡಗೂಡಿ ಧನ್ಯ ಜೀವನವನ್ನೆ ನಡೆಸುತ್ತಿದ್ದಳು ಬಾಲಕೃಷ್ಣನಾದರೋ ಕಾಲಂದುಗೆಯ ನಾದವನ್ನು ಬೀರುತ್ತಾ ಮನೆಯಲ್ಲೆಲ್ಲಾ ಬಿಡಾಡುತ್ತಾ, ಕುಣಿದು, ಜಿಗಿದು ಆಟವಾಡುತ್ತಿದ್ದನು. ಕೆಲವೊಮ್ಮೆ – ಹಿಂದೆ ಯಶೋದೆಯ ಮಡಿಲಲ್ಲಿ ಕುಳ್ಳಿರುತ್ತಿದ್ದಂತೆ – ಆಕೆಯ ಮಡಿಲನ್ನೇರಿ ಕೂರುತ್ತಾ, ಕೆಲವೊಮ್ಮೆ ತಾಯಿಯ ಆವಶ್ಯಕತೆಗಳನ್ನು ತಿಳಿದು, ವಿಧೇಯ ಪುತ್ರನಂತೆ ಅವಳ ಶುಶ್ರೂಷೆ ಮಾಡುತ್ತಾ, ವಿನೋದ ಪರನಾಗಿ, ಭಕ್ತದಾಸನೆಂಬಂತೆ, ಒಂದು ಕ್ಷಣವೂ ಅವಳನ್ನಗಲದೆ ಇರುತ್ತಿದ್ದನು. ಆಕೆಯ ಅಭೀಷ್ಟಗಳನ್ನೆಲ್ಲಾ ಹೇಳುವ ಮೊದಲೇ ನಿರ್ವಹಿಸುತ್ತಿದ್ದನು.

ಆಕಾಲದಲ್ಲಿ, ಪರಮ ಭಕ್ತವರ್ಯರೆನಿಸಿದ್ದ ಬಿಲ್ವಮಂಗಲಸ್ವಾಮಿ ತಮ್ಮ ಪೂಜಾವೇಳೆಯಲ್ಲಿ ಶ್ರೀ ಕೃಷ್ಣನ ದಿವ್ಯ ಮೂರ್ತಿಯನ್ನು ಪ್ರತ್ಯಕ್ಷವಾಗಿ ಕಂಡು ತಮ್ಮ ಪೂಜೆಗಳನ್ನು ಅರ್ಪಿಸುವುದು ಅವರ ಕ್ರಮವಾಗಿತ್ತು. ದಿನಾಲೂ ಪೂಜಾವೇಳೆಯಲ್ಲಿ ಬಾಲಕೃಷ್ಣನು ಓಡಿ ಬಂದು, ಪ್ರೀತಿಯಿಂದ ಅವರ ಆರಾಧನೆಯನ್ನು ಕೈಗೊಳ್ಳುತ್ತಿದ್ದನು. ಒಂದು ದಿನ ಎಷ್ಟು ಹೊತ್ತಾದರೂ ಕೃಷ್ಣನ ಸುಳಿವಿಲ್ಲದಿರಲು ಸ್ವಾಮಿಗಳು ವ್ಯಾಕುಲಚಿತ್ತರಾದರು. ಆ ನೀಲ ಮೇಘಶ್ಯಾಮನನ್ನು ನೋಡದೆ ಪೂಜೆ ಸಮರ್ಪಿಸುವಂತರಲಿಲ್ಲ. ಅವರು ಆರ್ದ್ರಹೃದಯರಾಗಿ ಬಹಳ ಹೊತ್ತು ಪ್ರಾರ್ಥಿಸಿದರು. ಕೃಷ್ಣನು ಅವಸರದಿಂದ ಓಡೋಡಿ ಬಂದನು. ಸ್ವಾಮಿಗಳು ತನಗಾದ ಪರಿಭವವನ್ನು ನಿವೇದಿಸಿದರು. ಆಗ ಕೃಷ್ಣನು, “ಕುರೂರಂಬೆ ನನ್ನನ್ನು ಮಡಿಕೆಯೊಳಗಿಕ್ಕಿ ಮುಚ್ಚಿದ್ದಳು. ಅಲ್ಲಿಂದ ಎದ್ದು ಬರಲಾರದವನಾದೆ, ಸ್ವಾಮಿಗಳೇ ನಾನು ಸುಳ್ಳು ಹೇಳುತ್ತಿಲ್ಲ, ಗುರುತು ಬೇಕಾದರೆ ಇದೋ, ನನ್ನಮೈಯಲ್ಲಿ ಅಂಟಿರುವ ಮಸಿಯನ್ನು ನೋಡಿ” ಎನ್ನುತ್ತಾ, ತನ್ನ ಸಚ್ಚಿದಾನಂದ ಮೈಯಲ್ಲಿ ಅಂಟಿರುವ ಮಸಿಯನ್ನು ತೋರಿದನು. ಸ್ವಾಮಿಗಳು ಅಚ್ಚರಿ ಪಟ್ಟರು. ಅವರ ಪುಣ್ಯಪುಂಜವನ್ನು ಕಾಣಬೇಕೆಂಬ ಆಸೆಯು ಮನದಲ್ಲಿ ಮೂಡದಿರಲಿಲ್ಲ.

ಕುರೂರಂಬೆ ಭಕ್ತರನ್ನು, ಸಜ್ಜನರನ್ನು ಭಗವಂತನ ಸ್ವರೂಪವೆಂದೇ ಆರಾಧಿಸುವುದರಲ್ಲಿ ಆಸಕ್ತಿಯುಳ್ಳವಳು. ಸ್ವಾಮಿಗಳಲ್ಲಿ ಗೌರವಭಾವದಿಂದ ತನ್ನ ಮನೆಗೆ ಭಿಕ್ಷೆಗೆ ಆಹ್ವಾನಿಸಿದಳು.

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

ಕೃಷ್ಣನನ್ನು ಪ್ರತ್ಯಕ್ಷ ಕಂಡು ಪೂಜಿಸುತ್ತಿದ್ದ ಸ್ವಾಮಿಗಳಿಗೆ ಯಾವ ಕಳಕಳಿಯೂ ಚಿಂತೆಯೂ ಇರಲಿಲ್ಲ. ಅವರು ಕುರೂರಂಬೆಯ ಆಹ್ವಾನವನ್ನು ಅಷ್ಟು ಮಹತ್ವದ್ದೆಂದು ಬಗೆಯದೆ, ಅವಜ್ಞೆಯಿಂದ ಅದನ್ನು ಮರೆತುಬಿಟ್ಟರು. ಸ್ವಾಮಿಗಳ ಬರವನ್ನೇ ಹಾರೈಸಿ, ಭಿಕ್ಷೆಗೆ ಸಿದ್ಧಪಡಿಸಿ, ಕಾದು ಕುಳಿತಿದ್ದ ಕುರೂರಮ್ಮ ಅವರ ಬರವನ್ನು ಕಾಣದೆ ಅತ್ಯಂತ ನೊಂದಳು. ಭಗವಂತನು ತನ್ನ ಅಂತರಂಗಭಕ್ತರ ಸಂಕಟವನ್ನು ಸಹಿಸಲಾರ! ಈ ವಾತ್ಸಲ್ಯಮಯಿಯ ಹೃದಯದ ನೋವಿಗೆ ಕಾರಣರಾದ ಸ್ವಾಮಿಗಳಿಗೆ ತಕ್ಕ ಶಾಸ್ತಿ ಮಾಡಲೆಂದು ಕೃಷ್ಣನು ಸ್ವಾಮಿಗಳ ದೃಷ್ಟಿಯಿಂದ ಮರೆಯಾದನು. ಎಷ್ಟು ಪರಿಯಾಗಿ ಕರೆದರೂ, ಪ್ರಾರ್ಥಿಸಿದರೂ ಮೈದೋರಲಿಲ್ಲ. ಕೃಷ್ಣ ವಿರಹದಿಂದ ದುಃಖಿತರಾದ ಸ್ವಾಮಿಗಳು ಕೃಷ್ಣನನ್ನು ಕರೆಕರೆದು ಮೊರೆಯಿಡಲಾರಂಭಿಸಿದರು. ಆಗ ಅಶರೀರ ವಾಣಿಯೊಂದು ಕೇಳಿಸಿತು "ಬಿಲ್ವಮಂಗಲಾ, ನನ್ನ ಅಂತರಂಗ ಭಕ್ತೆಯಾದ ಕುರೂರಂಬೆಯ ಅಪೇಕ್ಷೆಯನ್ನು ಧಿಕ್ಕರಿಸಿ, ಅವಳ ಹೃದಯದಲ್ಲಿ ನೋವನ್ನುಂಟು ಮಾಡಿದೆ. ಅವಳ ದುಃಖಕ್ಕೆ ಕಾರಣನಾದೆ, ನಾನಿದನ್ನು ಸಹಿಸಲಾರೆ, ಅವಳನ್ನು ಸಂತುಷ್ಟಿಗೊಳಿಸದೆ ನನ್ನ ದರ್ಶನ ಲಭಿಸದು. ಆಕೆ, ಏಳು ಜನ್ಮಗಳಿಂದಲೂ ನನ್ನನ್ನು ಆರಾಧಿಸುತ್ತಾ ಬಂದ ಪುಣ್ಯವಂತೆ. ಬಿಲ್ವ; ನೀನಾದರೋ ಮೂರು ಜನ್ಮಗಳಿಂದ. ಆದ್ದರಿಂದ ನನ್ನನ್ನು ಮೊದಲಿನಂತೆ ಕಾಣಬೇಕಾದರೆ ಕುರೂರಂಬೆಯನ್ನು ಸಮಾಧಾನ ಪಡಿಸು".

ಪರಮಾತ್ಮನ ವಾಣಿಯನ್ನು ಕೇಳಿ, ಭಕ್ತವಾತ್ಸಲ್ಯವನ್ನು ನೆನೆದು, ಪುಳಕಿತರಾದ ಸ್ವಾಮಿಗಳು ಆ ಸಂದೇಶದಂತೆ ನಡೆದರು. ಜಗತ್ಪ್ರಭುವಾದ ಭಗವಂತನು, ಮನೋಹರ ಬಾಲಸ್ವರೂಪಿಯಾಗಿ, ಆಕೆಯ ಆಜ್ಞೆಯನ್ನು ಪಾಲಿಸುತ್ತಾ, ಅವಳ ಗೃಹದಲ್ಲಿ ಈಡಾಡುತ್ತಾ, ಅವಳ ಸೇವೆಗೈಯುತ್ತಿರುವುದನ್ನು ಕಂಡು, ಅವಳ ಧನ್ಯತೆಯನ್ನು ನೆನೆದು, ಹಿರಿಮೆಯನ್ನು ತಿಳಿದು ಆಕೆಯನ್ನು ವಂದಿಸಿದರು.

ಇನ್ನೊಮ್ಮೆ ಕುರೂರಂಬೆ, ತಮ್ಮ ಗೃಹಕ್ಕೆ ಸಮೀಪ ಇರುವ ಚೆಮ್ಮಜೋಟ್ ಮನೆಗೆ ಸ್ವಾಮಿಗಳು ಭಿಕ್ಷೆಗೆ ಬರಲಿರುವರೆಂಬುದನ್ನು ತಿಳಿದು, ಆಗ ತನ್ನಲ್ಲಿಗೂ ಬರಬೇಕೆಂಬ ವಿನಂತಿಯನ್ನು ಹೇಳಿ ಕಳುಹಿಸಿದಳು. ಆಕೆಯ ಪರವಾಗಿ ಸೇವಕನಾಗಿಹೋದವನು ಕೃಷ್ಣನೇ! ಬಿಲ್ವಮಂಗಲರು ಹಾಗೆಲ್ಲಾ ಬರಲು ತಮಗೆ ಸಮಯವಿಲ್ಲವೆಂದು ನಿರಾಕರಿಸಿದರು. ಇದನ್ನು ತಿಳಿದು ಆಕೆ ವ್ಯಥೆಗೊಂಡಳು. ಸ್ವಾಮಿಗಳನ್ನು ಸತ್ಕರಿಸುವ ಭಾಗ್ಯಕ್ಕಾಗಿ ಮನಸ್ಸಿನಲ್ಲಿ ಪ್ರಾರ್ಥಿಸಿದಳು-

ಸ್ವಾಮಿಗಳು ಪರಿವಾರ ಸಹಿತ ಚೆಮ್ಮಜೋಟ್ ಮನೆ ಸಮೀಪಿಸುತ್ತಿದ್ದಂತೆ ತಮ್ಮ ಆಗಮನವನ್ನು ತಿಳಿಸುವುದಕ್ಕಾಗಿ ಪರಿಜನರು ಶಂಖವನ್ನು ಊದತೊಡಗಿದರು. ಆದರೆ ಶಂಖದಿಂದ ಶಬ್ದವೇ ಹೊರಡಲಿಲ್ಲ. ಎಲ್ಲರಿಗೂ ದಿಗಿಲು; ಕೂರೂರಂಬೆಯ ಸೇವಕನಾಗಿ ಬಂದಿದ್ದ ಕೃಷ್ಣನು ಮುಗುಳ್ನಕ್ಕು, "ಯಾತ್ರೆ ಕುರೂರ್ ಮನೆ ಕಡೆಗೆ ಸಾಗಲಿ. ಶಂಖದ ಶಬ್ದ ಮೊಳಗುತ್ತದೆ" ನಿರ್ವಾಹವಿಲ್ಲದೆ ಬಿಲ್ವಮಂಗಲರು ತಮ್ಮ ನಿರ್ಧಾರ ಸಡಲಿಸಬೇಕಾಯಿತು ಕೂಡಲೇ ಶಂಖದಲ್ಲಿ ಶಬ್ದ ಮೊಳಗಿತು. ಕುರೂರ್ ಮನೆಗೆ ಸ್ವಾಮಿಗಳು ಭಿಕ್ಷೆಗೆ ಆಗಮಿಸಿದರು. ಕೃಷ್ಣನು ನಮ್ರ ಸೇವಕನಂತೆ ಕುರೂರಂಬೆಗೆ ಬೇಕಾದ ಎಲ್ಲ ಸಿದ್ಧತೆಗಳನ್ನು ಒದಗಿಸುತ್ತಿದ್ದನು.

ಹೊಟ್ಟೆನೋವಿನಿಂದ ನರಳುತ್ತಿದ್ದ ಬ್ರಾಹ್ಮಣನೊಬ್ಬ ರೋಗ ಶಮನಕ್ಕೆ ಯಾವ ಉಪಾಯವೂ ಕಾಣದೆ ದೇವರನ್ನು ಪ್ರತ್ಯಕ್ಷ ಕಂಡು ಪೂಜಿಸುತ್ತಿದ್ದ ಬಿಲ್ವಮಂಗಲರಲ್ಲಿ ತನ್ನ ಕಷ್ಟ ನಿವೇದಿಸಿಕೊಂಡನು. ಬಿಲ್ವಮಂಗಲರು ಪೂಜಾ ವೇಳೆಯಲ್ಲಿ ಕೃಷ್ಣನನ್ನು ವಿಚಾರಿಸಿದಾಗ "ಆತನಿಗೆ ಏಳು ಜನ್ಮದ ಪ್ರಾರಬ್ಧ ಅನುಭವಿಸಬೇಕಾಗಿದೆ. ಆದ್ದರಿಂದ ರೋಗ ಈ ಜನ್ಮದಲ್ಲಿ ಗುಣ ಹೊಂದಲಾರದು" ಎಂದು ತಾನು ತಿಳಿದ ವಿಚಾರವನ್ನು ಬ್ರಾಹ್ಮಣನಿಗೆ ತಿಳಿಸಿದರು. ನಿರಾಶನಾದ ಬ್ರಾಹ್ಮಣ ಅಲೆಯುತ್ತಾ ಒಮ್ಮೆ ಕುರೂರ್ ಮನೆಗೆ ಬಂದನು. ಕುರೂರಂಬೆ ಬ್ರಾಹ್ಮಣನನ್ನು ಊಟಕ್ಕೆ ಕರೆದಳು. ಬ್ರಾಹ್ಮಣನು ತನ್ನ ರೋಗದ ವಿಚಾರ ತಿಳಿಸಿದನು. ಆಕೆ ದೃಢಸ್ವರದಲ್ಲಿ "ಊಟಕ್ಕೇಳಿ ಏನೂ ತೊಂದರೆಯಿಲ್ಲ. ನಾರಾಯಣ ನಾಮವನ್ನು ಸದಾ ಭಕ್ತಿಯಿಂದ ಕೀರ್ತಿಸಿ. ಈ ರೋಗಮುಂದೆ ನಿಮ್ಮನ್ನು ಬಾಧಿಸಲಾರದು" ಎಂದು ಹೇಳಿ ಊಟಕ್ಕೆಬ್ಬಿಸಿ ಸತ್ಕರಿಸಿದಳು. ಆ ಮಹಾನುಭಾವಳ ಉಪದೇಶದಂತೆ ನಾಮ ಸಂಕೀರ್ತಯಿಂದ ಗುರುಪುರೇಶನನ್ನು ಭಜಿಸಿ ಬ್ರಾಹ್ಮಣನು ರೋಗವಿಮುಕ್ತನಾದನು.

ತನ್ನ ಭಕ್ತಿಯ ಪಾಶದಿಂದ ಕುರೂರಮ್ಮ ಭಗವಂತನನ್ನು ಬಂಧಿಸಿದ್ದಳು. ಅವಳ ಬಂಧನದಿಂದ ಬಿಡಿಸಿಕೊಳ್ಳಲು ಭಕ್ತ ಪರಾಧೀನನಾದ ಕೃಷ್ಣನು ಅಶಕ್ತನಾಗಿದ್ದ. ಅವಳು ನೆನೆದುದನ್ನು ನುಡಿದುದನ್ನು, ನಡೆಸದಿರಲು ಭಗವಂತನಿಗೆ ಸಾಧ್ಯವಿರಲಿಲ್ಲ. ಇಂತಹ ಭಕ್ತಿ ಸ್ವರೂಪಿಣಿ ಭಕ್ತಸಾಧಕರಿಗೆ ಪೂಜ್ಯಳು! ★

गंगे ಚ ಯಮುನೇ ಚೈವ
ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ
ಜಲೇಽಸ್ಮಿನ್ ಸನ್ನಿಧಿಂ ಕುರು ॥

# ದಕ್ಷಿಣಗಂಗೆ ಕಾವೇರಿ

ಹಿರಿಯರು ಸ್ನಾನ ಮಾಡುವಾಗ ಹೇಳುವ ಸ್ತೋತ್ರವಿದು. ನಾವು ಸ್ನಾನ ಮಾಡು ವಂತಹ ನೀರಿನಲ್ಲಿ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದಾ, ಸಿಂಧು, ಕಾವೇರಿ ಮೊದಲಾದ ನದಿಗಳ ನೀರು ಸೇರಿರಲಿ ಎಂದು ಅರ್ಥವಾಗುತ್ತದೆ. ಹಿಂದೂ ಧರ್ಮದ ಪ್ರಕಾರ ನದಿಗಳನ್ನು ಪುಣ್ಯನದಿಗಳೆಂದೂ ಭಾವಿಸುವುದೂ, ಅವುಗಳಲ್ಲಿ ಸ್ನಾನ ಮಾಡಿ ಪುಣ್ಯ ಸಂಪಾದನೆ ಮಾಡುವುದೂ ಭಾರತೀಯರು ನಂಬಿಕೊಂಡು ಬಂದ ಮಾತಾಗಿದೆ.

ನಮ್ಮ ಹಿರಿಯರು ಪವಿತ್ರವಾದ ನದಿಗಳ ಪ್ರದೇಶದಲ್ಲಿ ಮನೆ ಮಠಗಳನ್ನು ಸ್ಥಾಪಿಸಿ ತಪಸ್ಸನ್ನಾಚರಿಸಿ ರಾಜ್ಯಗಳನ್ನು ಕಟ್ಟಿ ವೇದಪುರಾಣಗಳಿಗೆ, ಸಂಸ್ಕೃತಿ ಬೆಳವಣಿಗೆಗೆ ಉಜ್ವಲ ಪ್ರೋತ್ಸಾಹ ನೀಡಿದವರಾಗಿದ್ದರು. ಮೊಹೆಂಜೋದಾರ, ಹರಪ್ಪ ಪಟ್ಟಣಗಳು ಸಿಂಧೂನದಿಯ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತವೆ. ದೇಶದ ವೈಭವವನ್ನು ಸಾರುತ್ತವೆ.

ನಮ್ಮ ದೇಶದಲ್ಲಿ ಉತ್ತರದಲ್ಲಿ ಗಂಗೆಯು ವೇದಭೂಮಿಯೆಂದು ಹೇಗೆ ಪವಿತ್ರವಾಗಿದೆಯೋ, ದಕ್ಷಿಣದಲ್ಲಿ ಹಾಗೆ ಕಾವೇರಿಯು ದಕ್ಷಿಣದ ಗಂಗೆ, ಆರಣ್ಯಕಮಾತೆ ಎಂದು ಪ್ರಸಿದ್ಧಿ ಪಡೆದಿದ್ದಾಳೆ. ಉತ್ತರದಲ್ಲಿ ಭಗೀರಥನ ಪ್ರಯತ್ನದಿಂದಾಗಿ ಗಂಗೆಯು ಹೇಗೆ ಹರಿದಳೋ ಹಾಗೆಯೇ ದಕ್ಷಿಣದಲ್ಲಿ ಅಗಸ್ತ್ಯರ ಅನುಗ್ರಹದಿಂದ ಕಾವೇರಿಯು ನದಿಯಾಗಿ ಚಿಮ್ಮಿ ಕೋಟ್ಯಂತರ ಭಕ್ತರ ಪೂಜ್ಯ ಗೌರವಗಳಿಗೆ ಪಾತ್ರಳಾಗಿ ಲೋಕಪಾವನೆಯಾಗಿ ಹೊನ್ನಿನ ಹೊಳೆ ಎಂದು ಪ್ರಸಿದ್ಧಿ ಪಡೆದಿದ್ದಾಳೆ.

ಕಾವೇರಿ ನದಿಯ ಹುಟ್ಟಿನ ಬಗ್ಗೆ ಪುರಾಣಗಳಲ್ಲಿ ಅನೇಕ ಕತೆಗಳು ಕಂಡು ಬರುತ್ತವೆ. ಸ್ಕಾಂದ ಪುರಾಣದಲ್ಲಿ ಹೇಳಿದ ಪ್ರಕಾರ ಕಾವೇರಿ ಕೈಲಾಸದಲ್ಲಿ ಹರಿಯುತ್ತಿದ್ದ ನದಿ, ಈಶ್ವರನ ಆಜ್ಞೆಯಂತೆ ಅಗಸ್ತ್ಯರು ಅದರ ನೀರನ್ನು ಕಮಂಡಲದಲ್ಲಿ ತುಂಬಿ ದಕ್ಷಿಣ ದೇಶಕ್ಕೆ ಬಂದಾಗ, ಬರಗಾಲದಿಂದ ಕಂಗೆಟ್ಟಿದ್ದ ಊರಿನ ಜಲ ಸಮಸ್ಯೆಯನ್ನು ಅರಿತು ದೇವೇಂದ್ರನು ಆ ಕಮಂಡಲವನ್ನು ಉರುಳುವಂತೆ ಮಾಡುತ್ತಾನೆ. ತಮಿಳು ಕಾವ್ಯಗಳಲ್ಲೂ ಕಾವೇರಿಯ ಬಗ್ಗೆ ಹಲವು ಕತೆಗಳಿವೆ. ಕಾವೇರಿಯು ತನ್ನ ಪತಿಗೆ 'ನನಗೆ ತಿಳಿಸದೆ ಹೊರಗೆ ಹೋಗಬಾರದೆಂದು' ಹೇಳುತ್ತಾಳೆ. ಒಂದು ದಿನ ಅಗಸ್ತ್ಯರು ಅವಳಿಗೆ ತಿಳಿಸದೆ ಹೊರಗೆ ಹೋಗಿದ್ದಾಗ ಅವಳು ಸಿಟ್ಟಿನಿಂದ ಹೊಳೆಯಾಗಿ ಹರಿದಳೆಂದೂ ಕತೆಗಳು ಇವೆ.

ಮತ್ತೊಂದು ಕತೆಯಲ್ಲಿ ಕವೇರನೆಂಬುವವನು ಬ್ರಹ್ಮಗಿರಿ ಎನ್ನುವ ಪ್ರದೇಶದ ಅರಸನಾಗಿದ್ದನು. ಸಂತತಿಯಿಲ್ಲದ ಆತನು ಬ್ರಹ್ಮದೇವನನ್ನು ತಪಸ್ಸುಮಾಡಿ ಒಲಿಸಿ ಲೋಪಾಮುದ್ರೆಯನ್ನು ಮಗಳಾಗಿ ಪಡೆಯುತ್ತಾನೆ. ಕಾವೇರಿಗೆ ಲೋಪಾಮುದ್ರೆ ಎಂಬುದು ಇನ್ನೊಂದು ಹೆಸರಾಗಿದೆ. ಕವೇರನು ಲೋಪಾಮುದ್ರೆಯ ದಿವ್ಯ ತೇಜಸ್ಸು ಯೋಗ್ಯತೆಗಳನ್ನು ಕಂಡು ಆಕೆಯನ್ನು ಭಕ್ತಿಪೂರ್ವಕ ನೋಡುತ್ತಿದ್ದನು. ತನ್ನನ್ನು ಭಕ್ತಿಪೂರ್ವಕವಾಗಿ ಆದರಿಸುತ್ತಿದ್ದ ತಂದೆಯನ್ನು ಕುರಿತು ಲೋಪಾಮುದ್ರೆಯು ಲೋಕಕಲ್ಯಾಣ ಮತ್ತು ಜನರ ಪಾಪಗಳನ್ನು ತೊಳೆಯಲು ತಾನು ಹೊಳೆಯಾಗಿ ಹರಿಯುವೆನೆಂದು ತಿಳಿಸುತ್ತಾಳೆ.

ಇತ್ತ ಕಾವೇರಿಯು ಬ್ರಹ್ಮಗಿರಿಯಲ್ಲಿ ಋಷಿಗಳ ಆಶ್ರಮಗಳಲ್ಲಿ ಸುಖದಿಂದ ಕಾಲ ಕಳೆಯುತ್ತಿದ್ದಳು. ಉತ್ತರ ಭಾರತದಿಂದ ದಕ್ಷಿಣಾಪಥಕ್ಕೆ ಬಂದ ಅಗಸ್ತ್ಯರು ಕಾವೇರಿಯನ್ನು ಕಂಡು ಸಂತೋಷಪಟ್ಟರು.

ತ್ರಿಕಾಲಜ್ಞಾನಿಗಳಾದ ಅಗಸ್ತ್ಯರು ಕಾವೇರಿಯನ್ನು ವಿವಾಹವಾಗಬಯಸಿದರು. ಗೃಹಸ್ಥಾಶ್ರಮ ಜೀವನವನ್ನು ಸುಖವಾಗಿ ಕಳೆಯುತ್ತಿದ್ದ ಅಗಸ್ತ್ಯರು ಒಂದು ದಿನ ಕಾವೇರಿಯನ್ನು ಕಮಂಡಲದಲ್ಲಿ ಜಲರೂಪದಲ್ಲಿ ಕುಳ್ಳಿರಿಸಿ ಸ್ನಾನಕ್ಕೆಂದು ಹೊರಗೆ ಹೋಗುತ್ತಾರೆ. ಇದೇ ಸಮಯವನ್ನು ಕಾಯುತ್ತಿದ್ದ ಕಾವೇರಿಯು ಕಮಂಡಲದಿಂದ ಹೊರಳಿ ನದಿಯಾಗಿ ಹರಿಯುತ್ತಾಳೆ. ಲೋಕಕಲ್ಯಾಣಕ್ಕಾಗಿ ಮುಂದೆಸಾಗಿ ಕನಕೆ, ಸುಜ್ಯೋತಿಯರೊಂದಿಗೆ ಸೇರಿ ತ್ರಿವೇಣಿ ಸಂಗಮವಾಗಿ "ದಕ್ಷಿಣದ ಕಾಶಿ" ಎಂದು ಪ್ರಸಿದ್ಧಿ ಪಡೆಯುತ್ತಾಳೆ.

ಕಾವೇರಿಯ ಜನ್ಮತಾಳಿದ ದಿನವನ್ನು ಕಾವೇರೀ ಸಂಕ್ರಮಣವೆನ್ನುವರು. ಸೂರ್ಯನು ತುಲಾರಾಶಿಗೆ ಪ್ರವೇಶ ಮಾಡಬೇಕಾದರೆ ತಲಕಾವೇರಿಯ ಕುಂಡದಲ್ಲಿ ತೀರ್ಥ ಉದ್ಭವವಾಗಬೇಕು. ಆಕಾಲಕ್ಕೆ ಅನೇಕರು ನದಿಯಲ್ಲಿ ಮಿಂದು ಪುಣ್ಯವನ್ನು ಸಂಪಾದಿಸಿಕೊಳ್ಳುತ್ತಾರೆ. ಪ್ರತಿವರ್ಷ ಕಾವೇರಿಯ ಹುಟ್ಟು ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಕಾವೇರಿಯ ಉಪನದಿಗಳು ಲಕ್ಷ್ಮಣ ತೀರ್ಥ, ಹೇಮಾವತಿ, ಲೋಕಪಾವನಿ, ಶಿಂಷಾ, ಅರ್ಕಾವತಿ, ಕಪಿನಿ, ಭವಸಾ ಮುಂತಾದುವುಗಳಾಗಿವೆ.

ಕಾವೇರಿ ನದಿಗೆ ಕನ್ನಂಬಾಡಿ ಮತ್ತು ಮೆಟ್ಟೂರುಗಳಲ್ಲಿ ಅಣೆಕಟ್ಟು ಕಟ್ಟಿ ಕೃಷಿಗೆ ನೀರನ್ನು ಉಪಯೋಗಿಸಿಕೊಳ್ಳಲಾಗುತ್ತಿದೆ. ಜಲಾಶಯಗಳ ನೀರಿನಿಂದ ವಿದ್ಯುಚ್ಛಕ್ತಿಯನ್ನು ತಯಾರಿಸಲಾಗುತ್ತಿದೆ. ದಕ್ಷಿಣದ ಅನೇಕ ರಾಜರುಗಳ ರಾಜ್ಯಗಳು ಈ ನದಿಯ ದಡದಲ್ಲಿಯೇ ಕಟ್ಟಲ್ಪಟ್ಟವು, ಭೀಕರ ಕ್ಷಾಮ ಬಂದಾಗ ಜೀವಕೋಟಿಗೆ ಜೀವ ತುಂಬಿ, ಸಸ್ಯಗಳಿಗೆ ಹಸುರುಕಳೆತುಂಬಿ ದಕ್ಷಿಣದ ಗಂಗೆ, ಹೊನ್ನಿನ ನದಿ ಎಂದು ಕಾವೇರಿಯು ಖ್ಯಾತಿ ಪಡೆದಿದ್ದಾಳೆ.

——

ಜಯಶ್ರೀ ಜಿ. ಭಟ್

(12ನೇ ಪುಟದಿಂದ)

ನಮ್ಮನ್ನು ಕಾಪಾಡುವವರಾರೂ ಇಲ್ಲ – ತಾಯಿ.

ಆಯ್ತು ಏನೇ ಆಗಲಿ – ನಿಮ್ಮನ್ನು ಕಾಪಾಡುತ್ತೇನೆ. ನನ್ನ ಮಾತು ನಂಬಿ– ಈಗ ಹೇಳಿ ; ನಿಮ್ಮ ಸಂಕಟವೇನು ?

ನಾವು ಗಂಧರ್ವರಾಜ ಚಿತ್ರಸೇನನ ಪತ್ನಿಯರು. ಆತನಿಗೆ ಪ್ರಾಣಾಪಾಯ ಬಂದಿದೆ. ನಾಳೆ ಸೂರ್ಯಾಸ್ತಮಾನದೊಳಗಾಗಿ ಆತನ ತಲೆ ತೆಗೆದು ತೀರುತ್ತೇನೆಂದು– ದ್ವಾರಕಾಧೀಶ ಕೃಷ್ಣ ಪ್ರತಿಜ್ಞೆಮಾಡಿದ್ದಾನೆ – ನಮಗೆ ಪತಿಭಿಕ್ಷೆ ನೀಡಿ ಕಾಪಾಡಬೇಕು. ಏನೇ ಆದರೂ ರಕ್ಷಿಸುವುದಾಗಿ ತಾವು ಮಾತು ಕೊಟ್ಟಿದ್ದೀರಿ. ನಿಮ್ಮ ಮಾತು ಸಾರ್ಥಕ ಪಡಿಸಿಕೊಳ್ಳಿ.

– ಗಂಧರ್ವ ಸ್ತ್ರೀಯರು ಹೇಳಿದರು.

ವಿಚಾರ ಕೇಳಿ ಸುಭದ್ರಾದೇವಿ ಬೆಪ್ಪಾದಳು. "ನನ್ನ ಅಣ್ಣ ಕೃಷ್ಣ ಗಂಧರ್ವನನ್ನು ಕೊಲ್ಲುವ ಸಂಕಲ್ಪ ಮಾಡಿದ್ದಾನೆ. ಅಣ್ಣನ ಸಂಕಲ್ಪ ವೆಂದರೆ ಸತ್ಯ ಸಂಕಲ್ಪ. ಹೀಗಿರುವಾಗ ಚಿತ್ರಸೇನನನ್ನು ಕಾಪಾಡುವುದು ಹೇಗೆ? ಮಾತು ಕೊಟ್ಟು ಧರ್ಮ ಸಂಕಟಕ್ಕೆ ಸಿಕ್ಕಿ ಕೊಂಡಂತಾಯ್ತು. ಪಾವನ ಯಮುನಾಸ್ನಾನಮಾಡಿ ಈ ಪರ್ವ ದಿನ್ನ ಪರೋಪಕಾರಮಾಡಿ, ಸಕಲ ಶ್ರೇಯಸ್ಕರವೆಂದು ನಾರದರು ಹೇಳಿದ್ದಾರೆ. ಆ ಹಿರಿಯರ ಮಾತು ಮೀರತಕ್ಕದ್ದಲ್ಲ–ನಾನು ಈ ಸ್ತ್ರೀಯರಿಗೆ ಕೊಟ್ಟಮಾತು ಉಳಿಯಬೇಕು– ಹಾಗಾದರೆ ಅಣ್ಣನ ಮೇಲೆ ಸಮರ ಹೂಡಬೇಕೆಂದಾಯ್ತು !! ಇದೆಂತಹ ವಿಚಿತ್ರ ಸನ್ನಿವೇಶ ಬಂತು".

ಸುಭದ್ರೆಗೇನೂ ತೋಚಲಿಲ್ಲ, ನಡೆದ ವಿಷಯವನ್ನೆಲ್ಲ ಅರ್ಜುನನಲ್ಲಿ ಬಿನ್ನವಿಸಿದಳು. ಪಾರ್ಥನೂ ಕ್ಷಣಕಾಲ ಬೆಪ್ಪಾದ. ಚಿತ್ರಸೇನ ಅರ್ಜುನನಿಗೆ ಮಿತ್ರ–ಕೃಷ್ಣನಿಂದ ಗಂಧರ್ವ ರಾಜನಿಗೆ ಮರಣ–ಅದನ್ನು ತಪ್ಪಿಸುವೆನೆಂದು ಮಾತುಕೊಟ್ಟಿದ್ದಾಳೆ ಸುಭದ್ರೆ. ಆಕೆಯ ಮಾತು ಉಳಿಸಬೇಕು – ಇದು ಗಂಡನಾಗಿ ಪಾರ್ಥನ ಹೊಣೆ. ಮೇಲಾಗಿ ಪ್ರಾಣಾಪಾಯದಿಂದ ರಕ್ಷಿಸಬೇಕೆಂದಾಗ ಪಾರ್ಥ ಹಿಂದೆಗೆಯತಕ್ಕವನಲ್ಲ. ಆದರೆ ಈ ವ್ಯವಹಾರದಲ್ಲಿ ಮೂರನೆಯ ವ್ಯಕ್ತಿಗಾಗಿ ಬಂಧು ವರ್ಗದಲ್ಲಿ ವೈಮನಸ್ಯ–ದ್ವೇಷ !! ನಾರದರು ಇದರ ಹಿಂದೆ ತಮ್ಮ ಚಮತ್ಕಾರವನ್ನು ತೋರಿಸಿರಬಹುದೇ ? ದೈವಲೀಲೆ !! ನಾರದರು ಇಷ್ಟಕ್ಕೆ ಸುಮ್ಮನಾದಾರೇನು ? ದ್ವಾರಕಾಧೀಶನಾದ ಕೃಷ್ಣನ ಬಳಿ ಪುನಃ ಹೋದರು. ಅವನ ಪ್ರತಿಜ್ಞೆ ನೆರವೇರುವುದು ಅಸಂಭವವೆಂದರು. ಚಿತ್ರಸೇನನನ್ನು ರಕ್ಷಿಸುವ ವಿಚಾರದಲ್ಲಿ ಪಾರ್ಥನೂ ಸುಭದ್ರಾದೇವಿಯೂ ತುಂಬ ಶ್ರದ್ಧೆ ವಹಿಸಿದ್ದಾರೆಂಬ ವಿಷಯ ಅರಿಕೆ ಮಾಡಿದರು.

ಹಾಗಾದರೆ – ನಾ ರ ದ ರೆ – ತಾವು ಮತ್ತೊಮ್ಮೆ ಪಾರ್ಥನಿಗೆ ಹೇಳಿ ಈ ಬಗ್ಗೆ ತಟಸ್ಥನಾಗಿರುವುದೇ ಲೇಸೆಂದು ಸೂಚಿಸಿರಿ. ಇಲ್ಲವಾದರೆ ಪರಿಣಾಮ ನೆಟ್ಟಗಾಗಲಾರದೆಂದು ಖಚಿತವಾಗಿ ತಿಳಿಸಿಬಿಡಿ – ಕೃಷ್ಣನ ಧ್ವನಿಯಲ್ಲಿ ನಿರ್ಧಾರವೆದ್ದು ಕಾಣುತ್ತಿತ್ತು.

ಸ್ವಾಮಿಯ ಮಾತು ಮೀರಲಾದೀತೇ? ಅಥವ ಕೃಷ್ಣನಿಂದ ಪಾರ್ಥನಿಗೆ ತೊಂದರೆ ಯಾಗುವುದು ಸೂಕ್ತವೋ – ನಾರದರು ಪಾರ್ಥನಿಗೆ ವಿಚಾರವನ್ನು ಸ್ಪಷ್ಟ ಪಡಿಸಿದರು.

ನನ್ನ ಗಾಂಡೀವಕ್ಕೆ ಸೋಲೆಂದರೇನು ? ತ್ರಿಭುವನ ವಿಜಯಿಯಾದ ಈ ವಿಜಯನ ಮಾತು ಸುಳ್ಳಾಗುವು ದೆಂದರೇನು? ಪಾರ್ಥನ ವಜ್ರರಕ್ಷೆಯುಲ್ಲಿ ಗಂಧರ್ವರಾಜ ಸುಕ್ಷೇಮಿ – ಅವನ ಮೇಲೆ ಯಾರೂ ಕೈಮಾಡಲಾರರು – ಮಾಡಿದವರು ಯಾರೇ ಆಗಲಿ ಉಳಿಯಲಾರರು — ಧನಂಜಯನ ಮಾತಿನಲ್ಲಿ ಶೌರ್ಯವಿತ್ತು. "ಕೃಷ್ಣನು ನಿನಗೆ ತಿಳಿಸಬೇಕೆಂದು ಹೇಳಿದ ವಿಚಾರ ನಾನು ತಿಳಿಸಿದ್ದೇನೆ – ಇದರ ಮೇಲೆ ನಿಮ್ಮ ನಿಮ್ಮ ಇಷ್ಟ. ಇದರ ಮೇಲೆ ನಿನ್ನ ಅಭಿಪ್ರಾಯವೂ ಸರಿಯಾಗೇ ಇದೆ. ಅರ್ಜುನ; ಗಂಧರ್ವನ ಪ್ರಾಣ ರಕ್ಷಣೆ ನಿನಗೆ ಆದ್ಯ ಕರ್ತವ್ಯ – ಸುಭದ್ರೆಯ ಮಾತು ಉಳಿಯಬೇಕಲ್ಲವೇ?" ನಾರದರು ತುಂಬ ಸಹಾನುಭೂತಿಯಿಂದ ಹೇಳಿದರು.

"ಹಾಗಾದರೆ ಈಗ ನಾನೇನು ಮಾಡಲಿ"

ದೇವರ್ಷಿ ಏನೂ ಅರಿಯದವರಂತೆ ಪ್ರಶ್ನಿಸಿದರು " ಸುಮ್ಮನೆ ನಿಂತು ನೋಡುತ್ತಿರಿ.

## ಆರ್ಜಿತ ಅಭಿಷೇಕ

## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಅರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

ಮೇಲಾಗಿ ಈ ವಿಚಾರಕ್ಕೂ ನಿಮಗೂ ಎಳ್ಳಷ್ಟು ಸಂಬಂಧವಿಲ್ಲ ಇದು ಪರಸ್ಪರ ಹಠದ ಪ್ರಶ್ನೆ – ಗೌರವ ಪ್ರಶ್ನೆ. ಮಾತು ಉಳಿಸಿ ಕೊಳ್ಳುವ ಪ್ರಶ್ನೆ. ಲೋಕದಲ್ಲಿ ಕಾಪಾಡುವವನು ಶ್ರೇಷ್ಠನೇ ಹೊರತು – ಕೊಲ್ಲುವವನಲ್ಲ''

ಪಾರ್ಥನ ಮಾತು ಬಿಸಿಯಾಗಿತ್ತು.

ನಾರದರು ಮನಸ್ಸಿನಲ್ಲೇ ನಗುತ್ತ ಹೊರಟು ಹೋದರು. ಈಗ ಸುಭದ್ರಾ ದೇವಿಯನ್ನು ಪುನಃ ಭೇಟಿಯಾಗುವುದು ಸೂಕ್ತವಲ್ಲವೆಂದು ನಾರದರು ಊಹಿಸಿ ಕೊಂಡರು. ಚಿತ್ರಸೇನ ಮತ್ತು ಆತನ ಪತ್ನಿಯರು ಸುಭದ್ರಾದೇವಿಯ ರಕ್ಷಣೆಯಲ್ಲಿದ್ದಾರೆಂದು ಅವರಿಗೆ ಖಚಿತವಾಗಿ ತಿಳಿದಿತ್ತು.

ರಾತ್ರಿ ಕಳೆದು ಬೆಳಗಾಯ್ತು. ಚಿತ್ರಸೇನನ ಮನಸ್ಸಿನಲ್ಲಿ ಕಳವಳ ತುಂಬಿತ್ತು. ಅರ್ಜುನನ ಮನಸ್ಸಿನಲ್ಲಿ ಮಿತ್ರವಾತ್ಸಲ್ಯ ತುಂಬಿತ್ತು. ಸುಭದ್ರೆಯ ಮನದಲ್ಲಿ ಆತಂಕ ತುಂಬಿತ್ತು. ಕೃಷ್ಣನ ಮನಸ್ಸಿನಲ್ಲಿ ಕ್ಷಾತ್ರ ತುಂಬಿತ್ತು, ನಾರದರ ಮನಸ್ಸಿನಲ್ಲಿ ವಿನೋದ ತುಂಬಿತ್ತು!!

ಯಾದವರ ಸೈನ್ಯ ನಗರದತ್ತ ಧಾವಿಸಿ ಬರುತ್ತಿದೆ. ಕೃಷ್ಣ ಪಾರ್ಥನ ಮೇಲೆ ದಂಡೆತ್ತಿ ಬರುತ್ತಿದ್ದಾನೆಂಬ ಸುದ್ದಿ ಕೇಳಿ ಧರ್ಮರಾಜ ಗಡಗಡ ನಡುಗಿ ಹೋದ. ಇದೇನು ವಿಚಿತ್ರ? ನಮ್ಮಿಂದ ಏನು ಅಪರಾಧವಾಯ್ತೋ– ಸ್ವಾಮಿಗೇಕೆ ಈ ರೋಷವೋ–ಒಂದೂ ತಿಳಿಯದು. ಪಾರ್ಥನನ್ನೇ ಕೇಳಬೇಕೆಂದು ಆತ ಬರುವ ವೇಳೆಗಾಗಲೇ ಸೇವಕರು ಬಂದು ಅರಿಕೆಮಾಡಿದರು – "ಮಹಾಪ್ರಭು – ಅನಾಹುತವಾಗುತ್ತಿದೆ. ಪಾರ್ಥನೂ–ಪಾರ್ಥಸಾರಥಿಯೂ– ಕಕ್ಷಿ ಪ್ರತಿಕಕ್ಷಿಗಳಾಗಿ ತಂತಮ್ಮ ಸೈನ್ಯಗಳನ್ನು ಸಜ್ಜುಗೊಳಿಸಿಕೊಂಡು ನಿಂತಿದ್ದಾರೆ, ಗಂಧರ್ವರಾಜ ಚಿತ್ರಸೇನನನ್ನು ಕೊಲ್ಲಬೇಕೆಂದು ನಂದನಂದನನ ಪ್ರತಿಜ್ಞೆಯಂತೆ. ಅವನನ್ನು ಕಾಪಾಡುವ ಪ್ರತಿಜ್ಞೆ ಪಾರ್ಥ ಮಾಡಿದ್ದಾನಂತೆ".

ಧರ್ಮರಾಜನಿಗೆ ತಲೆಯಮೇಲೆ ಆಕಾಶವೇ ಕಳಚಿ ಬಿದ್ದಂತಾಯ್ತು. ಕೃಷ್ಣನ ಸಂಕಲ್ಪಕ್ಕೆ ವಿರುದ್ಧವಾಗಿ ಪಾರ್ಥನೇಕೆ ಯೋಜನೆ ಮಾಡಿದ? ಸ್ವಾಮಿ ನಮಗೆ ಮಾಡಿರುವ ಉಪಕಾರವನ್ನು ಮರೆತು ಯಾರೋ ಗಂಧರ್ವನಿಗಾಗಿ, ಈ ವಿರಸವನ್ನೇಕೆ ತಂದು ಕೊಂಡ?

ಸೌಜನ್ಯ ಶೀಲನಾದ ಧರ್ಮರಾಜನ ಮೃದು ಮನಸ್ಸು ಅಲ್ಲ ಕಲ್ಲೋಲವಾಗಿ ಹೋಯ್ತು. ಅಷ್ಟರಲ್ಲಿ ರಣವಾದ್ಯಗಳ ಶಬ್ದ ಕೇಳಬಂತು.

'ಪಾರ್ಥ ಗಂಧರ್ವರಾಜನ ಸುದ್ದಿ ನಿನಗೇಕೆ?' ಕೃಷ್ಣ ಕೇಳಿದ.

"ಅದೇ ಮಾತು ನಾನು ನಿನ್ನನ್ನು ಕೇಳುತ್ತಿದ್ದೇನೆ" – ಪಾರ್ಥ ಬಿಂಕವಾಗೇ ಉತ್ತರ ಕೊಟ್ಟ

"ಹಾಗಾದರೆ......"...

"ಈ ಪ್ರಶ್ನೆಗುತ್ತರ ನಾನು ಕೊಡಬೇಕಾಗಿಲ್ಲ – ನನ್ನ ಗಾಂಡೀವ ಕೊಡುತ್ತದೆ". ಯುದ್ಧ ಪ್ರಾರಂಭವಾಯ್ತು – ಇಬ್ಬರೂ ಧನುರ್ವಿದ್ಯಾ ಪ್ರವೀಣರು. ವಿವಿಧ ಮಂತ್ರಾಸ್ತ್ರ ಪ್ರಯೋಗ ಪರಿಣತರು. ಭುವನೈಕ ವಿಖ್ಯಾತ ಪೌರುಷ ಸಂಪನ್ನರು. ಅಪ್ರತಿಹತ ವೀರ ವಿಕ್ರಮ ಮೂರ್ತಿಗಳು!! ಯುದ್ಧ ಬಿಸಿಯೇರಿದಂತೆಲ್ಲ ಚಿತ್ರಸೇನನ ಆತಂಕ ಬಲವಾಗ ತೊಡಗಿತು. ಕೃಷ್ಣ ತನ್ನ ಸುದರ್ಶನ ಚಕ್ರವನ್ನು ಪ್ರಯೋಗಿಸಿದ– ಪಾರ್ಥ, ಹರದತ್ತ ಪಾಶುಪತಾಸ್ತ್ರವನ್ನು ಪ್ರತ್ಯಸ್ತ್ರವಾಗಿ ಪ್ರಯೋಗಿಸಿದ. ಭಾರೀ ದುರಂತವಾಗುವುದು ಖಚಿತವೆಂದು ಜಗತ್ತು ತಲ್ಲಣಿಸಿತು. ಮರುಕ್ಷಣದಲ್ಲೇ ಕೈಲಾಸಪತಿ ಶಂಕರ, ಯುದ್ಧರಂಗದಲ್ಲಿ ಪ್ರತ್ಯಕ್ಷವಾಗಿ ಆ ಎರಡು ಆಯುಧಗಳನ್ನೂ ತನ್ನೆರಡು ಕೈಗಳಲ್ಲಿ ಹಿಡಿದು ನಿಂತ.

"ವಾಸುದೇವ, ಭಕ್ತರ ಪ್ರತಿಜ್ಞೆಯನ್ನು ರಕ್ಷಿಸುವುದು ಭಕ್ತ ಪರಾಧೀನನಾದ ನಿನ್ನ ಕರ್ತವ್ಯ. ಹಿಂದು ಮುಂದು ನೋಡದೆ ಪ್ರತಿಜ್ಞೆಮಾಡುವುದು ಅರ್ಜುನನಿಗೆ ಹೊಸದೇನೂ ಅಲ್ಲ. ಆತನ ಪ್ರತಿಜ್ಞೆಯನ್ನು ಸಾರ್ಥಕ ಪಡಿಸುವುದು ಕರುಣಾಳುವಾದ ನಿನಗೆ ಹೊಸದೂ ಅಲ್ಲ. ಕುರುಕ್ಷೇತ್ರದಲ್ಲಿ

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಜಯದ್ರಥ ವಧೆಯ ಪ್ರಸಂಗದಲ್ಲಿ ಇದು ಜಗಜ್ಜಾಹೀರಾಗಿದೆ. ನೀನು ಮಾಡಿದ ಪ್ರತಿಜ್ಞೆಯನ್ನು ಭಕ್ತರಿಗಾಗಿ ಬದಿಗೊತ್ತುವುದು ಸೂಕ್ತ ಮತ್ತು ಅದು ಹಿಂದೆ ಅನೇಕ ಬಾರಿ ಆಗಿದೆಯಷ್ಟೆ''

ರಜತಗಿರಿಯೊಡೆಯ ನಸುನಗುತ್ತ ನುಡಿದ. ಶ್ಯಾಮಸುಂದರಕೃಷ್ಣ ಒಂದು ಕ್ಷಣ ಪಾರ್ಥನನ್ನು ದಿಟ್ಟಿಸಿ ನೋಡಿದ, ಅದೆಂತಹವಾತ್ಸಲ್ಯದ ನೋಟವೋ!! ಕೃಪಾ ಕಟಾಕ್ಷವೋ!! ಆತನ ಮುಖದಲ್ಲಿ ಮಂದಹಾಸ ಕಂಡು ಬಂತು- ಪಾರ್ಥ ತನ್ನ ವರ್ತನೆಗೆ ತಾನೇ ನಾಚಿದಂತೆ ತಲೆತಗ್ಗಿಸಿಕೊಂಡ. ಗೌರವ–ವಾತ್ಸಲ್ಯ– ಕೃತಜ್ಞತೆ ಮುಂತಾದ ದೈವೀಸಂಪತ್ತು ಪ್ರಬಲವಾದಾದ ಯುದ್ಧವೆಲ್ಲಿ? ಅಸ್ತ್ರಶಸ್ತ್ರಗಳ ಸೆಣಸಾಟವೆಲ್ಲಿ? ರಣರಂಗವು ಮೈತ್ರಿರಂಗವಾಗಿ ಪರಿವರ್ತಿತವಾಯ್ತು. ಆದರೆ ಗಾಲವಮಹರ್ಷಿಗೆ ಇದು ಸಮ್ಮತವಾಗಲಿಲ್ಲ. ಅಂದು ಅಡಗಿಸಿಕೊಂಡಿದ್ದ ಕೋಪವಿಂದು ಹೆಡೆಯೆತ್ತಿತು.

"ಕೃಷ್ಣ, ಅರ್ಜುನ, ಸುಭದ್ರೆ ಚಿತ್ರಸೇನ ಈ ನಾಲ್ಕು ಮಂದಿಯನ್ನು ನನ್ನ ತಪಶ್ಶಕ್ತಿಯಿಂದ ಈ ಕ್ಷಣ ಸುಟ್ಟು ಬೂದಿ ಮಾಡುತ್ತೇನೆ'' – ಗಾಲವ ಗುಡುಗಿದರು. ಕಮಂಡಲದಿಂದ ನೀರು ಅಭಿಮಂತ್ರಿಸಿ ಭೂಮಿಗೆಸೆಯುವಷ್ಟರಲ್ಲಿ – ಸುಭದ್ರಾದೇವಿ ಗಂಭೀರವಾಗಿ ಹೇಳಿದಳು.

"ಗಾಲವರೇ. ತಪೋಧನರಾದ ತಾವು ಹೀಗೆ ಸಂಯಮವನ್ನು ಕಳೆದುಕೊಳ್ಳುವುದು ಶೋಭಾಯಮಾನವಲ್ಲ. ನನ್ನ ಪಾತಿವ್ರತ್ಯದ ಮೇಲೆ ಆಣೆಇಟ್ಟು ಹೇಳುತ್ತೇನೆ– ಈ ನಿಮ್ಮ ಶಾಪೋದಕ ನಿಮ್ಮ ಕೈಯಲ್ಲೇ ಇಂಗಿಹೋದೀತೇ ವಿನಹ ಭೂಮಿಯ ಮೇಲೆ ಬೀಳುವುದೇ ಇಲ್ಲ.'

ಗಾಲವರು ಕೋಪದಿಂದ ನೋಡಿದರು. ಸುಭದ್ರೆಯ ಮಾತು ಸತ್ಯವಾಯ್ತು. ಚಿತ್ರಸೇನನ ಸಂತೋಷಕ್ಕೆ ಪಾರವಿಲ್ಲದಂತಾಯ್ತು. ಒಬ್ಬೊಬ್ಬರಿಗೊಂದೊಂದು ರೀತಿಯಲ್ಲಿ ಗರ್ವಭಂಗವಾದಂತಾಯ್ತು.

ಇದನ್ನು ಏನೆನ್ನಬೇಕು? ಚಿತ್ರಸೇನನ ಅದೃಷ್ಟವೆನ್ನಬೇಕೆ? ಪಾರ್ಥನ ಪರಾಕ್ರಮವೆನ್ನಬೇಕೆ? ಸುಭದ್ರೆಯ ಶಕ್ತಿಯೆನ್ನಬೇಕೆ? ಕೃಷ್ಣನ ಕರುಣೆಯೆನ್ನಬೇಕೆ? ಗಾಲವ ಪರಾಭವವೆನ್ನಬೇಕೆ? ನಾರದರ ತಂತ್ರವೆನ್ನಬೇಕೆ? ಅಥವ ಎಲ್ಲ ಜೀವಿಗಳ ಅಂತಃಸ್ಯೂತ ಚೇತನನಾದ ಪರಮಾತ್ಮನ ಲೀಲಾವಿನೋದವೆನ್ನಬೇಕೆ? ವಿವಿಧ ಜೀವಿಗಳ ವಿವಿಧ ಉದ್ದೇಶಗಳ ಪ್ರಕಟನೆಗಾಗಿ ವಿಧಿಯೊಡ್ಡಿದ ನೆಪವೆನ್ನಬೇಕೆ?

---



(9ನೇ ಪುಟದಿಂದ)

ಆದ್ದರಿಂದ ಸ್ವಾರ್ಥಕ್ಕಾಗಿ ಯಾವ ರೀತಿಯಿಂದಲೂ ಶಿಷ್ಯರನ್ನು ಶೋಷಿಸಬಾರದು.

ಗುರುವಿನ ಸೇವೆ ಬಹಳ ಮಹತ್ತರವಾದದ್ದು ಎಂಬ ಭಾವನೆ ಆದಿಯಿಂದಲೂ ಬೆಳೆದು ಬಂದಿದೆ. ಮಹಾಭಾರತದಲ್ಲಿ ಅನಾರ್ಯನೆಂಬ ಪರಿಭಾವನೆಗೆ ಒಳಗಾಗಿದ್ದ ಏಕಲವ್ಯನೇ " ಗುರುವಿಂಗೀವುದೇನ್ ತ್ಯಾಗಮೆ? ಪರಮ ಸಂಪದಮ್, ಅದುವೆ ಪುರುಷಾರ್ಥ ಸಾಧನಂ" ಎಂದು ಹೇಳಿರುವುದನ್ನು ನೋಡಿದರೆ ಗುರು ಸೇವೆ ಆಧ್ಯಾತ್ಮಿಕ ಕಾರ್ಯ ಎಂಬ ಮನೋಭಾವನೆ ಹೇಗೆ ಜನರಲ್ಲಿ ಬೆಳೆದು ಬಂದಿತ್ತೆಂಬುದನ್ನು ಅರಿಯಬಹುದು. ಗುರು ಸೇವೆ, ಗುರು ಕಾಣಿಕೆ ಇವು ಧರ್ಮ ಗೆಲ್ಲಲು, ದೈವೇಚ್ಛೆ ಗೆಲ್ಲಲು ಇರುವ ಸಾಧನವೇ ಹೊರತು ಅನ್ಯಥಾ ಅಲ್ಲ. ಆದ್ದರಿಂದ ಜನರು ಗುರುವನ್ನು ತಮ್ಮ ಏರಿಕೆಗೆ ಏಣಿಯನ್ನಾಗಿ ಮಾಡಿಕೊಳ್ಳದೆ ತಾನೆ ಗುರುವಿಗೆ ಶ್ರೇಣಿಯಾಗಿ ಉಳಿಯಬೇಕು. 'ಅರಿತರೆ ಶರಣ ಮರೆತರೆ ಮಾನವ' ಎಂಬ ಮಾತು ಗುರುವೂ – ಸಮಾಜವೂ ನಡೆದುಕೊಳ್ಳಬೇಕಾದ ಹಾದಿಯನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತದೆ.

ಸದ್ಗುರುವಿನಿಂದ – ಸಚ್ಚಾರಿತ್ರ್ಯ. ಸಚ್ಚಾರಿತ್ರ್ಯದಿಂದ – ಸದ್ಗತಿ.

★

(6ನೇ ಪುಟದಿಂದ)

ಆಳ್ವಾರುಗಳು :

ವೈಷ್ಣವಭಕ್ತರಿಗೆ ಆಳ್ವಾರ್‌ರೆಂಬ ಹೆಸರು. ಆಳ್ವಾರ್‌ರೆಂದರೆ ಭಕ್ತಿಯಲ್ಲಿ ಮುಳುಗಿದವರೆಂದರ್ಥ. ಇವರು ಹನ್ನೆರಡು ಜನ; ಪೊಯ್ಗೈ, ಪೂದತ್ತಾರ್, ಪೇಯಾಳ್ವಾರ್, ತಿರುಮಳಿಶೈ, ತಿರುಪ್ಪಾಣಿ, ತಿರುಮಂಗೈ, ನಮ್ಮಾಳ್ವಾರ್, ಮಧುರಕವಿ, ಕುಲಶೇಖರ, ಪೆರಿಯಾಳ್ವಾರ್, ಆಂಡಾಳ್, ತೊಂಡರ್ ಅಡಿಪ್ಪೊಡಿ – ಇವರುಗಳೇ ಈ ಹನ್ನೆರಡು ಜನ. ಸಂಪ್ರದಾಯ ಗ್ರಂಥಗಳಲ್ಲಿ ಆಳ್ವಾರುಗಳ ಕಾಲ ಕ್ರಿ. ಪೂ. ೪೨೦೩ ರಿಂದ ೨೭೦೬ ಎಂದು ನಿರೂಪಿತವಾಗಿದೆ. ಇತಿಹಾಸಕಾರರು ಅವರ ಕಾಲವನ್ನು ಕ್ರಿ.ಶ. ೫೦೦ ರಿಂದ ೮೦೦ ಇರಬಹುದೆಂದು ಊಹಿಸಿದ್ದಾರೆ.

ಆಳ್ವಾರುಗಳು ತಮಿಳುದೇಶದ ನಾನಾಕಡೆಗಳಲ್ಲಿ ಉದ್ಭವಿಸಿದವರು. ಮೊದಲು ನಾಲ್ಕು ಜನ ಪಲ್ಲವ ರಾಜ್ಯದವರು. ಕೊನೆಯ ಮೂರು ಮಂದಿ ಚೋಳದೇಶದವರು. ಕುಲಶೇಖರರು ಚೇರ ನಾಡಿನವರು, ಉಳಿದವರು ಪಾಂಡ್ಯ ಭೂಮಿಜರು, ನಮ್ಮಾಳ್ವಾರ್ ಇವರಲ್ಲಿ ಪ್ರಸಿದ್ಧರು. ಆಂಡಾಳ್ ಭಕ್ತ ಶಿಖಾಮಣಿಯಾದ ಸ್ತ್ರೀ ನಾಯನಾರ್‌ರಂತೆಯೇ ಆಳ್ವಾರುಗಳು ವಿವಿಧ ಜಾತಿ, ಕುಲ, ಮಟ್ಟದವರು. ಅವರಿಗೆಲ್ಲಾ ಸಮಾನವಾಗಿರುವುದು ವಿಷ್ಣುಭಕ್ತಿ. ನಮ್ಮಾಳ್ವಾರ್ ವೆಳ್ಳಾಳರು. ತಿರುಮಂಗೈ ಕಳ್ಳರ್ ಕುಲದವರು. ಕುಲಶೇಖರರು ರಾಜಋಷಿ. ಪೆರಿಯಾಳ್ವಾರ್ ಬ್ರಾಹ್ಮಣರು. ತಿರುಪ್ಪಾಣಿ ಅಂತ್ಯಜರು.

ನಾಲಾಯಿರ ದಿವ್ಯಪ್ರಬಂಧಗಳೆಂದು ಪ್ರಸಿದ್ಧವಾಗಿರುವ ಇವರ ಗೀತೆಗಳು ನಾಲ್ಕು ಭಾಗಗಳಾಗಿವೆ. ಪೆರಿಯಾಳ್ವಾರ್, ಆಂಡಾಳ್, ಕುಲಶೇಖರ, ತಿರುಮಳಿಶೈ, ತೊಂಡರಡಿಪ್ಪೊಡಿ, ಮಧುರಕವಿ ಇವರ ಕೃತಿಗಳನ್ನೊಳಗೊಂಡ ಮೊದಲ ಸಾವಿರಕ್ಕೆ 'ತಿರುಮೊಳಿ' ಎಂದು ಹೆಸರು. ಎರಡನೆಯ ಸಾವಿರಕ್ಕೆ "ಪೆರಿಯ ತಿರುಮೊಳಿ" ಎಂದು ಹೆಸರು. ಇವು ತಿರುಮಂಗೈ ಕೃತಿಗಳು ಮೂರನೆಯದು 'ಇಯರ್‍ಪಾ'. ಇದರಲ್ಲಿ ಮೊದಲು ಮೂರು ಆಳ್ವಾರುಗಳ ಕವನಗಳೂ ತಿರುಮಳಿಶೈ ನಮ್ಮಾಳ್ವಾರ್ ತಿರುಮಂಗೈ ಆಳ್ವಾರ್ ಅವರ ಕೆಲವು ಭಾಗಗಳೂ ಇವೆ. ನಾಲ್ಕನೆಯದೇ ತಿರುವಾಯ್ಮೊಳಿ, ಇದು ಪೂರ್ಣವಾಗಿ ನಮ್ಮಾಳ್ವಾರ್ ಅನುಭವಗೀತೆ.

ಮೊದಲ ಮೂರು ಆಳ್ವಾರುಗಳೂ ವೆಣ್ಬಾ ಛಂದಸ್ಸಿನಲ್ಲಿ ೧೦೦ ಪಾಶರಗಳುಳ್ಳ ಒಂದೊಂದು ಅಂದಾದಿ (ಅಂತ್ಯಾದಿ)ಯನ್ನು ರಚಿಸಿದ್ದಾರೆ. ಭಕ್ತರ ಮೃದುಸರಳ ಹೃದಯವನ್ನು ಇಲ್ಲಿ ಕಾಣಬಹುದು. ಸಾಂಪ್ರದಾಯಿಕ ಕತೆಯ ಪ್ರಕಾರ ಈ ಮೂವರೂ ಒಟ್ಟಿಗೆ ಭಗವಂತನನ್ನು ಕಂಡು ಹಾಡಿದರು. ತಿರುಮಳಿಶೈ ವೀರ ವೈಷ್ಣವರು, ಜೈನ ಬೌದ್ಧ ಶೈವರಿಗೆ ಎಂದೂ ಮಣಿಯದವರು ಅವರ ವೈಷ್ಣವನಿಷ್ಠೆ ಬಲುಹಿರಿದು.

ನಮ್ಮಾಳ್ವಾರ್ ಮತ್ತು ಮಧುರಕವಿ ಇವರಿಬ್ಬರನ್ನೂ ಜೊತೆಯಲ್ಲಿ ಅಭ್ಯಾಸ ಮಾಡುವುದು ಲೇಸು. ನಮ್ಮಾಳ್ವಾರ್ ಪ್ರಥಮ ವರ್ಗದ ಅನುಭಾವಿ. ದೈವಮತ್ತರಾದ ಜೀವಿ. ಮಧುರಕವಿಯು ಅವರನ್ನು ಹುಡುಕಿಕೊಂಡು ಬಂದು ಅವರ ಭಕ್ತ್ಯತಿಶಯವನ್ನು ಮನಗಂಡು ಅದನ್ನು ಪರಿಪೋಷಿಸಿ ಅವರ ಬಾಯಿಂದ ಬಂದ ಗೀತೆಗಳನ್ನೆಲ್ಲಾ ಸಂಗ್ರಹಿಸಿ ಮುಂದಿನ ತಲೆಮಾರಿಗೆ ಉಳಿಸಿಕೊಟ್ಟಿದ್ದಾರೆ. ನಮ್ಮಾಳ್ವಾರ್‍ರ ಗೀತೆಗಳ ನಾದಮಾಧುರ್ಯ, ಭಾವದ ಆಳ, ಸೌಂದರ್ಯೋಪಾಸನೆ ಅನುಭವೈಕವೇದ್ಯ, ಆಳ್ವಾರ್‍ರುಗಳ ಪ್ರಕೃತಿ ಚಿತ್ರವನ್ನಾಗಲಿ ಆತ್ಮಾನುಭವವನ್ನಾಗಲಿ ಪರಮಾತ್ಮ ಸಾಕ್ಷಾತ್ಕಾರವನ್ನಾಗಲಿ, ಬಹು ಹೃದಯಂಗಮವಾಗಿ ವರ್ಣಿಸಬಲ್ಲರು. ಇವರು "ತಿರುವಿರುತ್ತಮ್", 'ತಿರುವಾಶರಿಯಮ್' "ಪೆರಿಯ ತಿರುವಂದಾದಿ", "ತಿರುವಾಯ್‌ಮೊಳಿ" ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. 'ತಿರುವಾಯ್‌ಮೊಳಿ'ಯು ಹತ್ತು ಶತಕಗಳಾಗಿಯೂ ನೂರು ದಶಕಗಳಾಗಿಯೂ ವಿಭಾಗವಾಗಿದೆ. 'ತಿರುವಾಯ್‌ಮೊಳಿ'ಯಲ್ಲಿ ಆಳ್ವಾರ್ ತಮ್ಮನ್ನು ನಾಯಕಿಯನ್ನಾಗಿ ಭಾವಿಸಿಕೊಂಡು ನಾಯಕನಾದ ಪರಮಾತ್ಮನ ಸೇರುವಿಕೆಗಾಗಿ ತವಕಪಡುತ್ತಿರುವಂತೆ ವರ್ಣಿಸುತ್ತಾರೆ. ಈ ಮಧುರಭಾವದ ಪರಾಕಾಷ್ಠತೆಯನ್ನು ಅವರ 'ತಿರುವಿರುತ್ತ'ದಲ್ಲಿ ಕಾಣಬಹುದು. ಅದು ಉತ್ತಮೋತ್ತಮವಾದ ಭಾವಗೀತೆಯೆಂಬುದರಲ್ಲಿ ಸಂದೇಹವಿಲ್ಲ.

ಮಧುರಕವಿ ನಮ್ಮಾಳ್ವಾರ್‍ರ ಸಾಕ್ಷಾತ್ ಶಿಷ್ಯರು. ಅವರ 'ಕಣ್ಣಿನುಣ್ ಶಿರುತ್ತಾಂಬು' ಎಂಬ ಹತ್ತು ಪಾಶರಗಳು ತಮ್ಮ ಗುರುವಾದ ನಮ್ಮಾಳ್ವಾರ್‍ರ ವಿಷಯಕವಾದುವು.

ಪೆರಿಯಾಳ್ವಾರು (ವಿಷ್ಣುಚಿತ್ತನ್) ಶ್ರೀವಿಲ್ಲಿಪುತ್ತೂರಿನ (ರಾಮನಾಡಿನಲ್ಲಿ) ಬ್ರಾಹ್ಮಣ ಮನೆತನದವರು. ಅವರಿಗೆ ಆಂಡಾಳ್ ಎಂಬ ಕುವರಿಯು ಭೂಮಿಯನ್ನು ಅಗೆಯುತ್ತಿದ್ದಾಗ ಸಿಕ್ಕಿದಳು ಆಕೆಯನ್ನು ಬಹು ವಿಶ್ವಾಸದಿಂದ ಸಾಕಿ ಶ್ರೀರಂಗನಾಥನಿಗೆ ಅರ್ಪಿಸಿದರು. ಇವರ ಕೃತಿಗಳಲ್ಲಿ 'ತಿರುಪ್ಪಲ್ಲಾಂಡು' ಬಹಳ ಬಳಕೆಯಲ್ಲಿದೆ. ಇವರು ಸುಮಾರು ೫೦೦ ಪಾಶರಗಳನ್ನು ರಚಿಸಿದ್ದಾರೆ. ಇವುಗಳಲ್ಲೆಲ್ಲಾ ಶಿಶುವಾದ ಕೃಷ್ಣನ ವಿಷಯಕವಾದ ಅಪಾರ ಪ್ರೇಮವು ಕಂಡುಬರುತ್ತದೆ.

ವಿಷ್ಣುಚಿತ್ತರ ಭಕ್ತಕುವರಿಯಾದ ಆಂಡಾಳ್ (ಕೋದೈ) ಜನನದಿಂದಲೂ ದೈವಭಕ್ತಿಯಲ್ಲಿ ಮುಳುಗಿ ಅನವರತ ಅವನ ಚಿಂತನೆಯಲ್ಲಿಯೇ ತೊಳಲಿ ಕೊನೆಗೆ ಶ್ರೀರಂಗನಾಥನಲ್ಲಿ ಐಕ್ಯವಾದಳು. ತಾನು ಗೋಪಿಯರಲ್ಲೊಬ್ಬಳೆಂದು ಭಾವಿಸಿಕೊಂಡು ಕೃಷ್ಣನನ್ನು ಹುಡುಕಿ ಆತನಿಗಾಗಿ ಹಂಬಲಿಸಿ ತನ್ನ ಸರ್ವಸ್ವವನ್ನು ಆತನಿಗರ್ಪಿಸಿದ್ದಾಳೆ. 'ನಾಚ್ಚಿಯಾರ್ ತಿರುಮೊಳಿ' ಮತ್ತು 'ತಿರುಪ್ಪಾವೈ' ಆಕೆಯ ಎರಡು ಭಕ್ತಿಗೀತೆಗಳು, ತಿರುಪ್ಪಾವೈ ಭಕ್ತಿಸುಧೆ, ಗಾನಮಧು, ಹೃದಯ ಕೈರವಕ್ಕೆ ತಣ್ಪನ್ನು ಕೊಡುವ ಶಾಂತಿವಿಧು

ಕುಲಶೇಖರರು ತಿರುವಾಂಕೂರಿನ ದೊರೆ. ಸ್ವಲ್ಪ ಸ್ವಲ್ಪವಾಗಿ ಭಗವದ್ಭಕ್ತಿಯಲ್ಲಿ ಲೀನರಾಗುತ್ತಾ ಕೊನೆಗೆ ರಾಜ್ಯವನ್ನೇ ತೊರೆದು ದೇವಸೇವೆಯಲ್ಲಿ ಮಗ್ನರಾದರು. ಇವರು 'ಪೆರುಮಾಳ್ ತಿರುಮೊಳಿ' ಎಂಬ ೧೦೫ ಪಾಶರಗಳ ಪ್ರಬಂಧವನ್ನು ರಚಿಸಿದ್ದಾರೆ. (ಸಂಸ್ಕೃತದಲ್ಲಿ ಇವರು ರಚಿಸಿರುವ ಮುಕುಂದಮಾಲೆ ಬಹು ಸುಂದರವಾದ ಸ್ತೋತ್ರ)

ಉಳಿದವರಲ್ಲಿ ತಿರುಪ್ಪಾಣಿ ೧೦ ಪಾಶರಗಳನ್ನೂ ತೊಂಡರಡಿಪ್ಪೊಡಿ ೫೫ ಗೀತೆಗಳನ್ನೂ ತಿರುಮಂಗೈ ೧೩೫೧ ಪದ್ಯಗಳನ್ನು ರಚಿಸಿದ್ದಾರೆ. ತಿರುಪ್ಪಾಣಿ ಅಂತ್ಯಜರಾದರೂ ಶ್ರೀ ರಂಗನಾಥನ ಆಜ್ಞೆಯ ಮೇರೆ ಬ್ರಾಹ್ಮಣರಾದ ಲೋಕಸಾರಂಗ ಮುನಿಯ ತೋಳಿನ ಮೇಲೆ ದೇವಾಲಯವನ್ನು ಪ್ರವೇಶಿಸಿ ರಂಗನಾಥನಲ್ಲಿ ಐಕ್ಯವಾದರು. ತಿರುಪ್ಪಾಣಿಯು ಶ್ರೀರಂಗನಾಥನನ್ನು ಕಂಡಾಗ ತನ್ನ 'ಅಮಲನಾದಿಪಿರಾನ್' ಎಂಬ ಹತ್ತು ನುಡಿಗಳನ್ನು ಹಾಡಿದರು.

ವೀರನಾರಾಯಣನೆಂಬ ಹೆಸರುಳ್ಳ ತೊಂಡರಡಿಪ್ಪೊಡಿ ವೇಶ್ಯಾ ಸಂಬಂಧದಿಂದ ಅಧೋಗತಿಗಿಳಿದು ರಂಗನಾಥನ ಕರುಣಾಕಟಾಕ್ಷದಿಂದ ಉದ್ಧಾರವಾಗಿ ಅವನ ವಿಷಯಕವಾದ 'ತಿರುಮಾಲೈ' ಮತ್ತು 'ತಿರುಪ್ಪಳ್ಳಿಯೆಳುಚ್ಚು' ಎಂಬ ಎರಡು ಪ್ರಬಂಧಗಳನ್ನು ಹಾಡಿದ್ದಾರೆ. 'ತಿರುಪ್ಪಳ್ಳಿಯೆಳುಚ್ಚು' ಮಧುರವಾದ ಸುಪ್ರಭಾತ ಕಾವ್ಯ.

ತಿರುಮಂಗೈಯಾಳ್ವಾರ್‍ರ ಜೀವನವು ಸಾಹಸಯುತವಾದುದು. ಉತ್ಸಾಹಪೂರಿತವಾದುದು. ಅವರ ಕಾವ್ಯದಲ್ಲಿ ನಾದವಿದೆ. ಆಡಂಬರವಿದೆ. ಛಂದಸ್ಸಿನ ಓಟವಿದೆ; ವೈಚಿತ್ರ್ಯಗಳಿವೆ. ಅನುಭಾವಿಯ ದೃಷ್ಟಿಯಿಂದ ಆಳ ಕಡಿಮೆ.

ಆಳ್ವಾರುಗಳ ಜೀವನ ವಿವರಗಳಲ್ಲಿಯೂ ಅವರ ದೃಷ್ಟಿಯಲ್ಲಿಯೂ ವೈಯಕ್ತಿಕ ಗುಣ ತಾರತಮ್ಯಗಳಲ್ಲಿಯೂ ಭಿನ್ನಾಭಿಪ್ರಾಯವಿದ್ದರೂ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ.

"ನಾಲಾಯಿರ ಪ್ರಬಂಧ"ದ ಆಧ್ಯಾತ್ಮಿಕ ಬೆಲೆಯ ವಿಷಯದಲ್ಲಿ ಎಲ್ಲರೂ ಮಣಿಯಬೇಕಾಗಿದೆ.

ಕೊನೆಯಲ್ಲಿ ನಾಯನಾರ್ ಮತ್ತು ಆಳ್ವಾರ್‌ರವರ ಭಕ್ತಿ ಮಾರ್ಗದ ಲಕ್ಷಣಗಳನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು :— ಅವರು ಯಾವ ಒಂದು ಮತಕ್ಕೂ ಸೇರಿದವರಲ್ಲ. ವಿವಿಧವರ್ಣಗಳಿಗೆ ಸೇರಿದವರು. ಹಾಗೆಯೇ ಯಾವ ನಿಷ್ಕೃಷ್ಟವಾದ ದರ್ಶನಗ್ರಂಥಗಳಿಂದಲೂ ಬಂಧಿತರಾದವರಲ್ಲ. ಭಗವತ್ಸಾಕ್ಷಾತ್ಕಾರವನ್ನು ತಮ್ಮ ಸ್ವತಂತ್ರ ಸಾಧನೆಯಿಂದ ಪಡೆದವರು. ಬಹುದೇವತಾ ಪೂಜೆಯನ್ನು ನಿಷೇಧಿಸಿ ಏಕದೇವತೆಯಲ್ಲಿ ಆಸಕ್ತರಾದವರು. ಆದರೂ ಆ ಏಕಾತ್ಮ ದೇವತೆಯು ಬಹು ರೂಪವುಳ್ಳದ್ದು. ಅವರ ಮೋಕ್ಷಸಾಧನೆಗೆ ಭಕ್ತಿಯೇ ಏಕೈಕಮಾರ್ಗ. ಅದು ಅನ್ಯತಾ ಭಾವವಿಲ್ಲದ ಸಾಂದ್ರೀಕೃತವಾದ ಭಕ್ತಿ. ಆ ಭಕ್ತಿಯು ಅವ್ಯಾಜವಾದ ಪ್ರೇಮರೂಪವಾಗಿ ಪರಿಣಾಮಗೊಳ್ಳುವುದು. ಆ ಪ್ರೇಮವು ಮನುಷ್ಯ ಮನುಷ್ಯರ, ಪಿತಾಪುತ್ರರ, ಸ್ನೇಹಿತ ಸ್ನೇಹಿತರ, ಅರಸರ, ಪ್ರಿಯಪ್ರೇಯಸಿಯರ ಪ್ರೀತಿಯ ಭಾವವನ್ನು ತಾಳಬಹುದು. ಅವುಗಳಿಗೆ ಸನ್ಮಾರ್ಗ, ಸತ್ಪುತ್ರಮಾರ್ಗ, ಸಖಾಮಾರ್ಗ, ದಾಸ್ಯಮಾರ್ಗ ಮತ್ತು ಮಧುರಮಾರ್ಗಗಳೆಂಬ ಹೆಸರುಗಳೂ ಉಂಟು. ಇದರಲ್ಲಿ ಭಗವಂತನೊಡನೆ ಮಧುರ ಮಾರ್ಗದಲ್ಲಿ ಕೂಡುವುದು ಭಕ್ತನಿಗೆ ಬಹು ಪ್ರಿಯವಾದುದು. ದೇವರು ದೇವಾಲಯದಲ್ಲಿ ಮಾತ್ರವಲ್ಲ. ಪ್ರತಿಯೊಬ್ಬನ ಹೃದಯ ಪಂಜರದಲ್ಲಿಯೂ ಅಡಗಿರುತ್ತಾನೆ. ಆದುದರಿಂದಲೇ ಅವನು ಶರೀರಿ, ಇತರರೆಲ್ಲಾ ಶರೀರ. ಆದುದರಿಂದಲೇ ಅವರಣವಾದ ಶರೀರ ಮತ್ತು ಮನಸ್ಸು ಬಹು ಶುದ್ಧವಾಗಿರ ತಕ್ಕದ್ದು. ಈ ಪ್ರೇಮವು ತನ್ನ ಸ್ವತಃ ಸಂಪಾದನೆಗೆ ಸುಲಭ ಸಾಧ್ಯವಲ್ಲ. ಅದಕ್ಕೆ ಮಾರ್ಗದರ್ಶಕನಾದ ಗುರುವಿನ ಅವಶ್ಯಕತೆಯುಂಟು. ಗುರುವೂ ಕೂಡ ಕೃಪಾಮಯನೂ, ಜ್ಞಾನಿಯೂ ಆಗಿದ್ದರೂ ಭಗವಂತನ ಅನುಗ್ರಹ ಸಂಕಲ್ಪವಿಲ್ಲದೆ, ಮೋಕ್ಷವು ಸಾಧ್ಯವಾಗುವುದಿಲ್ಲ. ಆ ಕೃಪೆಯು ಲಭಿಸಬೇಕಾದರೆ ಶರಣ್ಯನಲ್ಲಿ ಸಂಪೂರ್ಣಶರಣಾಗತಿಯನ್ನು ಮಾಡುವುದು ಪರಮಾವಶ್ಯಕ.

ಈ ಭಕ್ತರು ತಮ್ಮ ಅನುಭವಗಳನ್ನು ದೇಶ ಭಾಷೆಯಲ್ಲಿ ಪ್ರಚಾರ ಮಾಡಿರುವುದರಿಂದ ವರ್ಣ ವ್ಯತ್ಯಾಸವಿಲ್ಲದೆ ಪಂಡಿತಪಾಮರರೆಂಬ ನೀಚೋಚ್ಚ ಭಾವವಿಲ್ಲದೆ, ಸ್ತ್ರೀ ಪುರುಷರೆಂಬ ಲಿಂಗವ್ಯತ್ಯಾಸ ವಿಲ್ಲದೆ, ಎಲ್ಲರಿಗೂ ಆತ್ಮಜ್ಞಾನ ಸಾಧ್ಯವಾಗಲು ಅವಕಾಶವಾಯಿತು. ಅಲ್ಲದೆ ಮುಂದಿನ ಆಚಾರ್ಯರುಗಳು ಸಿದ್ಧಾಂತವನ್ನು ಜನರಲ್ಲಿ ಪ್ರಚಾರಮಾಡಲು ಬಹು ಸುಲಭವಾಯಿತು. ★

# ಆಳ್ವಾರರ ಭಕ್ತಿ ಭಂಡಾರ

ಆಳ್ವಾರರು ಯಾರು ? – ಜಗತ್ತಿನ ವಿವಿಧ ಹಂತಗಳಲ್ಲಿ, ವಿವಿಧ ಕಾಲಗಳಲ್ಲಿ, ವಿವಿಧ ಚೇತನರಲ್ಲಿ, ಪರಮಾತ್ಮನ ವೈಷಮ್ಯ ಮತ್ತು ನೈರ್ಘೃಣ್ಯ ನಿವಾರಣೆಗಾಗಿ, ಸ್ವಾಮಿಯು ಸರ್ವಜ್ಞ ಜನಕವಾದ ಕೃಪೆಯನ್ನು ಕರುಣಿಸುತ್ತಾನೆ ಎಂದು ತಿಳಿಸುವ ಸಾಮರ್ಥ್ಯಪಡೆದ ಮಹಾವ್ಯಕ್ತಿಗಳು. 'ಸದಾ ಪಶ್ಯಂತಿ' ಎಂಬ ಉಪನಿಷತ್ತಿನ ವಾಕ್ಯದಂತೆ, ಪರತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡು ಅದರ ನಿರಂತರ ಪ್ರಚಾರಕ್ಕಾಗಿ ಸದಾ ಹಂಬಲಿಸುವ ವರ್ಗಕ್ಕೆ ಸೇರಿದ ಮಹಾತ್ಮರು ಆಳ್ವಾರರು. ಇವರೇ ದಿವ್ಯಸೂರಿಗಳು, ಕರ್ಮಕ್ಲೇಶವನ್ನು ಪಡೆಯದೆ ನಿತ್ಯವೂ, ನಿರಂತರವೂ ಈಶಸೇವೆ, ಈಶ ಸಾಕ್ಷಾತ್ಕಾರದಲ್ಲಿ ಪರಮಾನಂದ ಹೊಂದಿ ಆ ಅನುಭವವನ್ನು ಸರ್ವರೂ ಪಡೆಯಲಿ ಎಂಬ ಮಹೋದ್ದೇಶದಿಂದ ಶ್ರಮಿಸಿದವರು ಆಳ್ವಾರರು.

ಸಂಸಾರಕ್ಲೇಶವನ್ನು ನೋಡಿ, ಅನುಭವಿಸಿದ ವ್ಯಕ್ತಿಗೆ ಸರ್ವೇಶ್ವರನ ಕೃಪೆಯಿಂದ, ಪರಮಾತ್ಮ ಸಾಕ್ಷಾತ್ಕಾರವೇರ್ಪಟ್ಟರೆ ಅಂತಹ ವ್ಯಕ್ತಿಯು ಅದು ಮೊದಲುಗೊಂಡು ದೇಹಪಾತದವರೆಗೆ ಇಹ ಲೋಕದಲ್ಲಿದ್ದರೂ, ಭಗವದನುಭವದಲ್ಲಿ ಅಪರಿಮಿತ ಆನಂದವನ್ನು ಅನುಭವಿಸಿ, ಭಗವದನುಭವ ಪ್ರಾಪ್ತಿಗಾಗಿ ಸದಾ ಪ್ರಾರ್ಥಿಸಿ, ಮೊರೆಯಿಡುವ ಪವಿತ್ರಾತ್ಮರು ಆಳ್ವಾರರು.

'ಅಚ್ಯುತ ಪದಾಂಬುಜ ಯುಗ್ಮರುಕ್ಮ ವ್ಯಾಮೋಹತಃ ತದಿತರಾಣಿ ತೃಣಾಯ ಮೇನೇ' ಎಂಬಂತೆ ಈಶ್ವರಾನುಭವ ಇಲ್ಲದ ಇತರ ವಿಷಯಗಳಲ್ಲಿ ಇವರಿಗೆ ತೃಣಪ್ರಾಯ· ಈಶ್ವರ ಸೃಷ್ಟಿಯ ತೃಣವಾದರೂ ಈಶ್ವರನಂತೆ ಸಂಸೇವ್ಯವಸ್ತುವಾಗಿ ಪರಿಗಣಿಸುವ ಶ್ರೇಷ್ಠ ವ್ಯಕ್ತಿಗಳು ಆಳ್ವಾರರು.

ಭಕ್ತಿ ಸಾಗರದಲ್ಲಿ ಮುಳುಗಿ ಭಗವಂತನ ಧ್ಯಾನದಲ್ಲಿ ಸದಾ ನಿರತರಾಗಿ, ನಿತ್ಯ, ನಿರಂತರ ನಿರ್ಮಲ ತತ್ತ್ವಸಾಕ್ಷಾತ್ಕಾರಕ್ಕಾಗಿ ಸತತ ಪ್ರಯತ್ನ ನಡೆಸಿದವರು ಆಳ್ವಾರರು. ತಮಿಳುನಾಡಿನ ತಾಮ್ರಪರ್ಣಿ, ವೈಗೈ, ಕಾವೇರೀ ನದೀತೀರದಲ್ಲಿ ಅವತರಿಸಿ, ಆ ಜೀವನದಿಗಳು ಮಾನವರ ತನು ಮನಗಳನ್ನು ತಣಿಸುವಂತೆ, ಮಾನವರಲ್ಲಿ ಭಕ್ತಿಯನ್ನು ಪ್ರಚೋದಿಸಿ ಅವರ ಮನಸ್ಸನ್ನು ತೃಪ್ತಿಪಡಿಸಿದ ಮಹಾನುಭಾವರು ಆಳ್ವಾರರು. ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ, ಜನರು ಅಧೋಗತಿಗಳಿಯುವುದನ್ನು ಸಹಿಸದೆ, ಸದಾ ಕರೆನೀಡುವ ಸಹಜ ಸ್ವಭಾವವುಳ್ಳ ಪವಿತ್ರ ವ್ಯಕ್ತಿಗಳು ಆಳ್ವಾರರು. ಇಂತಹ ಸ್ವರ್ಗೀಯ ಗುಣವುಳ್ಳವರಾದುದರಿಂದ ಇವರನ್ನು ಪರಮಾತ್ಮನ ಅಂಶಾವತಾರ ಎಂದು ಪರಿಗಣಿಸಲಾಗಿದೆ.

ಪರಮಾತ್ಮನ ದಿವ್ಯ ಆಯುಧ ಆಭರಣಗಳಾದ, ಶಂಖ, ಚಕ್ರ, ಗದೆ, ಶಾರ್ಙ್ಗ, ನಂದಕ, ಕೌಸ್ತುಭ, ಶ್ರೀವತ್ಸ, ವನಮಾಲ ಇತ್ಯಾದಿ ಅಂಶಗಳಿಂದ ಅವತರಿಸಿದವರು ಆಳ್ವಾರರು. ಗೋದಾದೇವಿಯು ಭೂದೇವಿಯ ಅಂಶ. ಇವರನ್ನು ಅಭಿನವ ದಶಾವತಾರ ಎಂದು ಹೇಳಲಾಗಿದೆ. ಆಳ್ವಾರರು ಭಾಗವತ ಮತಕ್ಕೆ ಸೇರಿದವರು. ಇವರಲ್ಲಿ ಜಾತಿ, ಕುಲ, ಸ್ತ್ರೀ,ಪುಂ. ಭೇದವಿಲ್ಲ. ಏಕದೇವೋಪಾಸನೆ, ದೇವತಾಂತರ ಪರಿತ್ಯಾಗ, ಭಕ್ತಿ ಪ್ರಪತ್ತಿಗಳ ಪಾರಮ್ಯ ಇವೇ ಇದರ ಲಕ್ಷಣಗಳು. ಪರಮಾತ್ಮನ ದೃಷ್ಟಿಯಲ್ಲಿ ಎಲ್ಲರೂ ಸಮಾನರು, ಎಲ್ಲರೂ ಮೋಕ್ಷ ಪಡೆಯುವರು. ಜಾತಿಯ ಉತ್ಕರ್ಷ, ಅಪಕರ್ಷಗಳು ಇವರಲ್ಲಿ ಇಲ್ಲ. ಭಕ್ತಿಯು ಕುಲವಿಲ್ಲದವರಿಗೆ ಕುಲವನ್ನೂ, ಸಿರಿಯಿಲ್ಲದವರಿಗೆ ಸಿರಿಯನ್ನೂ ತರುವುದು, ಆಳ್ವಾರರು ಸದಾ ಭಗವಂತನ ಧ್ಯಾನದಲ್ಲಿ ತಲ್ಲೀನರಾಗಿ, ಅನೇಕ ದಿವ್ಯಕ್ಷೇತ್ರಗಳಲ್ಲಿ ಬಿಜಯಮಾಡಿರುವ ಭಗವಂತನ ದಿವ್ಯಮಂಗಳ ವಿಗ್ರಹ ಅರ್ಚಾಮೂರ್ತಿಗಳ ವರ್ಣನೆಯನ್ನೂ, ವೈಭವವನ್ನೂ, ಮಹಿಮೆಯನ್ನೂ, ದಿವ್ಯವಾದ ಪದ್ಯಗಳಲ್ಲಿ ಹಾಡಿದ್ದಾರೆ. ಇವೇ ದಿವ್ಯ ಪ್ರಬಂಧಗಳು, ಭಕ್ತಿ ಸಾಮ್ರಾಜ್ಯದ ಭಂಡಾರ ಎನ್ನಿಸಿಕೊಂಡಿವೆ.

ಹನ್ನೆರಡು ಮಂದಿ ಆಳ್ವಾರರು ಅನನ್ಯ ಭಕ್ತಿಯಿಂದ ಹಾಡಿರುವ ನಾಲ್ಕುಸಾವಿರ ಪದ್ಯಗಳ ರಾಶಿಗೆ ದಿವ್ಯಪ್ರಬಂಧ ಎಂದು ಹೆಸರು. ಇದು ಭಕ್ತಿ ಭಂಡಾರ. ಬಹುಕಾಲ ಆಚರಣೆಯಲ್ಲಿದ್ದು. ಕಾಲಕ್ರಮದಲ್ಲಿ ಶಿಲವಾಯಿತು. ನಾಥಮುನಿಗಳೆಂಬ ಮಹಾತ್ಮರು ಮಹಾಪ್ರಯತ್ನಮಾಡಿ ಯೋಗದೃಷ್ಟಿಯಿಂದ ನಮ್ಮಾಳ್ವಾರರನ್ನು ಪ್ರಾರ್ಥಿಸಿ, ಸಾಕ್ಷಾತ್ಕರಿಸಿಕೊಂಡು, ನಾಲ್ಕು ಸಾವಿರ ದಿವ್ಯ ಪ್ರಬಂಧಗಳನ್ನು ಪುನಃ ಪ್ರಕಾಶನ ಮಾಡಿದರು. ಅಚಿಂತ್ಯ, ಅದ್ಭುತ, ನಿತ್ಯ, ಯೌವನ, ಲಾವಣ್ಯ, ಅಮೃತ ಸಮಾನವಾದ ಮತ್ತು ಭಕ್ತಿಯನ್ನು ಪ್ರಚೋದಿಸತಕ್ಕ ದಿವ್ಯ ಪ್ರಬಂಧಗಳು ಪುನಃ ಪ್ರಚಾರದಲ್ಲಿ ಬಂದವು.

ಪ್ರಬಂಧ ಶಬ್ದಕ್ಕೆ ಪ್ರಕೃಷ್ಟವಾದ ಬಂಧ. ಅಂದರೆ, ದೋಷ ರಹಿತವಾದ ಶಬ್ದರಾಶಿ, ಸರ್ವಾಕರ್ಷಕ ಶಬ್ದಗಳ ಸೇರ್ಪಡೆ, ಸೌಂದರ್ಯವನ್ನೂ, ಭಕ್ತಿಯನ್ನೂ ಪ್ರಕಾಶಪಡಿಸತಕ್ಕ ಬಗೆ, ಓದುಗರಿಗೆ ಹೃದಯಾಹ್ಲಾದವನ್ನೂ, ನಿರತಿಶಯ ಭಕ್ತಿಯನ್ನೂ ನೀಡಬಲ್ಲ ಸಾಮರ್ಥ್ಯ, ಮತ್ತು ಉತ್ಸಾಹಜನಕ ಅಪೂರ್ವತೆ – ಇತ್ಯಾದಿ ಅರ್ಥಗಳನ್ನು ಒಳಗೊಂಡ ಶಬ್ದರಾಶಿ. ಒಟ್ಟಿನಲ್ಲಿ, ಅಮೋಘವಾದ, ಅನಂತವಾದ, ಶಾಶ್ವತವಾದ, ಪರಿಶುದ್ಧವಾದ, ಆನಂದ ನೀಡಬಲ್ಲ ಶಬ್ದರಾಶಿಯ ಗ್ರಂಥ ದಿವ್ಯಪ್ರಬಂಧ. ಇಲ್ಲಿ ತಪಶ್ಶಕ್ತಿ, ಪಾವಿತ್ರ್ಯ, ಭಕ್ತಿಪ್ರಚೋದನೆ ಎಲ್ಲವೂ ಇವೆ· ಪರಮಾತ್ಮನ ಕೃಪೆಯಿಂದ ಇದರ ಕರ್ತೃಗಳು ದಿವ್ಯಜ್ಞಾನಪಡೆದವರು. ಇದರ ರಚನೆ, ನಿತ್ಯ, ನಿರ್ಮಲವಾಗಿದೆ. ದಿವ್ಯಪ್ರಬಂಧ ಎಂಬ ಹೆಸರಿಗೆ· ದಿವ್ಯವಾದ ಜ್ಞಾನ, ಸ್ವಪ್ರಯತ್ನದಿಂದ ಸಾಧಿಸಿದ ಜ್ಞಾನ, ಅಯಾಚಿತ ಮತ್ತು ಅಯತ್ನದಿಂದ ಸಿದ್ಧಿಸಿದ ಜ್ಞಾನ, ಎಂದು ಅರ್ಥ ಮಾಡಬಹುದು. ವೇದಗಳಂತೆ, ಇವು ಅನುಪಮ ಶ್ರೇಷ್ಠ ಸ್ಥಾನವನ್ನು ಪಡೆದಿವೆ. ವೇದಗಳಲ್ಲಿ ಕಾಣುವ ಅರ್ಥವನ್ನು ಇವುಗಳಲ್ಲಿ ಕಾಣುವುದಲ್ಲದೆ ಅನುಭವಪೂರ್ವಕ ಮಹದಾನಂದವನ್ನುಂಟುಮಾಡುತ್ತವೆ. ಇಂತಹ 'ದಿವ್ಯತ್ವ'ವನ್ನು ನೀಡುವ ಪ್ರಬಂಧಗಳು ದಿವ್ಯ ಪ್ರಬಂಧ.

ವೇದಾಂತದೇಶಿಕರು ತಾವು ರಚಿಸಿರುವ ಪ್ರಬಂಧ ಸಾರದಲ್ಲಿ ದಿವ್ಯಪ್ರಬಂಧಗಳ ಸಾರಾರ್ಥ, ರಚನೆಕಾರರ ಹೆಸರು, ಸ್ಥಳ, ತಿರು ನಕ್ಷತ್ರ, ಸಂಖ್ಯೆ ಎಲ್ಲವನ್ನೂ ಅಳವಡಿಸಿ ಸಂಗ್ರಹಿಸಿ ಸ್ಪಷ್ಟಪಡಿಸಿದ್ದಾರೆ. ಅವುಗಳಲ್ಲಿ ತಮಗಿರುವ ಜ್ಞಾನ ಭಕ್ತಿ ಸಂಕೇತವೋ ಎನ್ನುವಂತೆ 'ತಮಿಳ್ ಮರೆಯೋನ್'' ಎಂದು ಹಿರಿಹಿಗ್ಗಿನಿಂದ ಹೇಳಿಕೊಂಡಿದ್ದಾರೆ.

ಪ್ರಬಂಧ ಸಾರದ ಕೊನೆಯ ಪಾಶುರದ ತಾತ್ಪರ್ಯ ಹೀಗಿದೆ. 'ಪರಮ ಕರುಣಾಳುಗಳಾದ ಆಳ್ವಾರರು ನಾಲ್ಕುವೇದಗಳ ಸಾರಾಂಶವನ್ನು, ನಾಲ್ಕುಸಾವಿರ ಪಾಶುರಗಳನ್ನೊಳಗೊಂಡ 24 ಪ್ರಬಂಧಗಳಲ್ಲಿ ಕ್ರೋಡೀಕರಿಸಿದರು. ಈ ಪ್ರಬಂಧಗಳ ಎಣಿಕೆ, ವಿಷಯ. ಪದ್ಯಗಳ ಸಂಖ್ಯೆ ಎಲ್ಲವನ್ನೂ, ಯಾರೂ ವಿಪರೀತವಾಗಿ ತಿಳಿದುಕೊಳ್ಳಬಾರದೆಂದು, ಸರಿಯಾಗಿ ಲೆಕ್ಕವಿಟ್ಟು ಪ್ರಬಂಧ ಸಾರವನ್ನು ರಚಿಸಲಾಗಿದೆ, ಹೆಸರು ಅನ್ವರ್ಥವಾಗಿದೆ ಇದನ್ನು ಮನನ ಮಾಡುವರು

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ಪರಮಾತ್ಮನ ಕೃಪೆಗೆ ಪಾತ್ರರಾಗುವರು' ಎಂದಿದ್ದಾರೆ.

"ಪರಾಂಕುಶ, ಪರಕಾಲರೂಪತ್ತಾಲೇ ಅಭಿನವಮಾಹ ಒರು ದಶಾವತಾರಂ ಪಣ್ಣಿ, ಮೇಘಂಗಳ್ ಸಮುದ್ರ ಜಲತ್ತೈ ವಾಂಗಿ ಸರ್ವೋಜೀವ್ಯಮಾನ ತಣ್ಣೀರಾಕ್ಕಿ, ಉಮಿಯು ಮಾಪ್ಪೋಲೇ, ವೇದಾರ್ಥ ತತ್ವಂಗಳಿಲ್ ವೇಂಡು ಸಾರತಮಾರ್ಥತ್ತೈ ಸರ್ವರುಂ ಅಧಿಕರಿಕ್ಕಲಾನ, ಭಾಷೆಯಾಲೇ ಸಂಗ್ರಹಿತ್ತು ಕಾಟ್ಟಿ" ಎಂದು ನಿರೂಪಿಸಲಾಗಿದೆ. ಕೊಳೆ ನೀರನ್ನು ಪರಿಶುದ್ಧ ಮಾಡಿ ಸ್ವಚ್ಛಪಡಿಸಿದ ಸಾರತಮವಾದ ಮಳೆನೀರಿನಂತೆವೆ ದಿವ್ಯಪ್ರಬಂಧಗಳು. ವೇದಗಳಿಗೆ ವಿವರಿಸಲು ಕಷ್ಟವಾದ ಕೆಲವು ಗಹನ ವಿಷಯಗಳನ್ನು ಪ್ರಬಂಧಗಳು ಸರ್ವೋತ್ತಮರೀತಿಯಲ್ಲಿ ವಿವರಿಸುತ್ತವೆ ಎಂದು ಅಭಿಪ್ರಾಯ ಪಡಲಾಗಿದೆ.

ತಿರುಪ್ಪಾಣಾಳ್ವಾರರು 'ಅಮಲನಾದಿ ಪಿರಾ' ಎಂಬ ಹತ್ತು ಪದ್ಯಗಳನ್ನು ಹಾಡಿದ್ದಾರೆ. ಇದರಲ್ಲಿ ವೇದದ ಸಾರಾರ್ಥ ಅಡಗಿದೆ. ವಿದ್ವಾಂಸರು ವೇದದ ವಿಷಯದಲ್ಲಿ ಅತಿ ದೀರ್ಘ ಲೇಖನ ಬರೆಯುವಷ್ಟು ವಿಷಯ ಈ ಹತ್ತು ಪದ್ಯಗಳಲ್ಲಿ ಬೀಜರೂಪದಲ್ಲಿ ಅಡಗಿವೆ ಎಂದು ಪರಿಗಣಿಸಲಾಗಿದೆ. ಹಾಗೆಯೇ ತಿರುಮಳಿಶೈಯಾಳ್ವಾರರು ಹಾಡಿರುವ 'ನಾನ್ಮುಕನ್ ತಿರುವಂದಾದಿ' ಪ್ರಬಂಧದಲ್ಲಿ ವೇದಾರ್ಥದ ತಿರುಳು ಅಡಗಿದೆ. ಪರಮಾತ್ಮನ ಅನುಗ್ರಹದಿಂದ ಆಳ್ವಾರರು ವಿಪುಲರೀತಿಯ ವೇದದ ಅರ್ಥಗಳನ್ನು ವಿವರಿಸಿ ಪ್ರಚಾರಮಾಡುವುದಕ್ಕೆ ಅವತರಿಸಿದರು.

ನಮ್ಮಾಳ್ವಾರವರ ನಾಲ್ಕು ಕೃತಿಗಳು ನಾಲ್ಕು ವೇದಗಳ ಸಾರ. ಇವುಗಳಲ್ಲಿ 'ತಿರುವಾಯ್ಮೊಳಿ'ಗೆ ಭಗವದ್ವಿಷಯ ಎಂಬ ಹೆಸರು ರೂಢಿಯಲ್ಲಿದೆ. ಇವೆಲ್ಲ ರಸಭರಿತ ಕಾವ್ಯಗಳು. ಹಾಲಿನ ಕೆನೆಯಂತೆ ಸೊಗಸಾಗಿವೆ. ಪರಮಾತ್ಮನ ವಿಷಯಾನಂದದಿಂದ ನಮ್ಮ ಮನಸ್ಸು ಹುಚ್ಚೆದ್ದು ಕುಣಿಯುವಂತೆ ನಮ್ಮಾಳ್ವಾರವರ ಕೃತಿಗಳು ಮಾಡುತ್ತವೆ. ಪರಾಶರ ಕೃತ ವಿಷ್ಣು ಪುರಾಣಕ್ಕಿಂತ ದಿವ್ಯ ಪ್ರಬಂಧಗಳು ನಮ್ಮ ಆನಂದವನ್ನು ಹೆಚ್ಚಿಸುತ್ತವೆ. ಹೇಗೆಂದರೆ ಪರಾಶರರ ಮಾತುಗಳು ಭಕ್ತಿಯನ್ನು ಹೆಚ್ಚಿಸುತ್ತವೆ ನಿಜ. ಆದರೆ ದಿವ್ಯಪ್ರಬಂಧಗಳು ಅಂತಹ ಭಕ್ತಿಯು ಶೀಘ್ರದಲ್ಲಿ ಉಂಟಾಗುವಂತೆ ಪರಿಣಾಮಕಾರಿಯಾಗಿವೆ. ತಮಿಳು ತಿಳಿಯದೇ ಇರುವವರೂ ಕೂಡ ದಿವ್ಯ ಪ್ರಬಂಧಗಳ ತಿರುಳನ್ನೂ, ಮಹಿಮೆಯನ್ನೂ ತಿಳಿದುಕೊಳ್ಳಲು ಸಹಾಯವಾಗುವಂತೆ ವೇದಾಂತದೇಶಿಕರು ದ್ರಮಿಡೋಪನಿಷತ್ ಸಾರ, ದ್ರಮಿಡೋಪನಿಷತ್ ರತ್ನಾವಳಿ, ಎಂಬ ಸಂಸ್ಕೃತ ಗ್ರಂಥಗಳನ್ನು ರಚಿಸಿದ್ದಾರೆ. ಹೀಗೆ ಅವರು ದಿವ್ಯ ಪ್ರಬಂಧಗಳ ಮಹಿಮೆಯನ್ನು ಮೇಲ್ಮೆಯನ್ನೂ ಸಂಸ್ಕೃತ ಭಾಷೆಯಲ್ಲಿ ಬಹು ಸೊಗಸಾಗಿ ವಿವರಿಸಿದ್ದಾರೆ

ಆಳ್ವಾರರು ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿ ಅವತರಿಸಿದರೂ, ಅವರೆಲ್ಲರ ಗುರಿ — ವಿಷ್ಣುಭಕ್ತಿ ಪ್ರಬೋಧನೆ ಮತ್ತು ಪ್ರಚಾರ. ಇವರ ಪರಮಾತ್ಮ ಸಾಕ್ಷಾತ್ಕಾರದ ವಿವರಣೆಯೇ ದಿವ್ಯಪ್ರಬಂಧ. ಈ ವಿವರಣೆಯಲ್ಲಿ ಪವಿತ್ರ ವಿಷ್ಣುದೇವಾಲಯಗಳ ಅರ್ಚಾಮೂರ್ತಿಗಳ ವರ್ಣನೆ, ವೈಭವ, ಮಹಿಮೆ, ಪ್ರಾರ್ಥನೆ— ಎಲ್ಲವೂ ಇವೆ. ಇಂತಹ ಪಾಶುರಗಳಲ್ಲಿ ಭಕ್ತಿ ಪ್ರವಾಹವೇ ಹರಿಯುತ್ತದೆ. ಅವು ಭಕ್ತಿ ಭಂಡಾರವೇ ಆಗಿವೆ.

"ಎಲೈ! ಮಾನವರೇ! ಅನನ್ಯ ಭಕ್ತಿಯಿಂದ ಪರಮಾತ್ಮನ ನಾಮಸ್ಮರಣೆ ಮಾಡಿ ಪ್ರಾರ್ಥಿಸುವ ವಿಧಾನವನ್ನು ಕಲಿಯಿರಿ. ವೈದಿಕ ರೀತಿಯಲ್ಲಿ ಪೂಜಿಸಲಾಗದಿದ್ದರೆ, ಸ್ವಾಮಿಯ ನಾಮವನ್ನಾದರೂ ತಪ್ಪದೆ ಸ್ಮರಣೆಮಾಡಿ ಎಂದಿದ್ದಾರೆ" ಪೂದತ್ತಾಳ್ವಾರರು. ಶಂಖಚಕ್ರಧಾರಿಯಾದ ಪರಮಾತ್ಮನ ವೈಭವವನ್ನು ಕುರಿತು ಭಕ್ತಿಯಿಂದ ಹಾಡಿದ್ದಾರೆ. ಸ್ವಾಮಿಯು ಮೋಕ್ಷದಾತ, ಜಗನ್ನಿಯಾಮಕ, ರಕ್ಷಕ ಎಂದು ಹೇಳಿ, ಭಕ್ತಿ ಸ್ವರೂಪವನ್ನು ವಿವರಿಸುವ ಅನೇಕ ಪದ್ಯಗಳನ್ನು ಹಾಡಿದ್ದಾರೆ.

ವಿಷ್ಣುಭಕ್ತಿ ಪ್ರಚೋದನೆಯ ಮೂಲಸ್ಥಾನ ವೈಷ್ಣವದೇವಾಲಯಗಳು. ಇಂತಹ ದೇವಾಲಯಗಳ ಅರ್ಚಾಮೂರ್ತಿಗಳ ವೈಭವವನ್ನು ಎಲ್ಲ ಆಳ್ವಾರರುಗಳು ಹೊಗಳಿದ್ದಾರೆ. ಭಕ್ತಿಯಿಂದ ಸ್ತೋತ್ರಮಾಡಿದ್ದಾರೆ. ಇವರೆಲ್ಲರಲ್ಲಿಯೂ ಭಕ್ತಿ ಭಾವನೆ ಪ್ರಾರಂಭವಾಗುತ್ತದೆ. ಇಂತಹ ಪ್ರಾರ್ಥನೆ ಕ್ರಮವಾಗಿ ಧ್ಯಾನವಾಗಿ ಪರಿಣಮಿಸುತ್ತದೆ. ಈ ಧ್ಯಾನವು ಪರಮಾತ್ಮನ ಅನೇಕ ರೂಪಗಳನ್ನು ಕುರಿತಾಗಿರುತ್ತದೆ. ಧ್ಯಾನವು ವೃದ್ಧಿಯಾದಂತೆ ಅದು ಆತ್ಮ ಸಾಕ್ಷಾತ್ಕಾರಕ್ಕೆ ಸಾಧನವಾಗುತ್ತದೆ. ಇಂತಹ ಸ್ಥಿತಿಯಲ್ಲಿ, ಆಳ್ವಾರರು ಹಾಡುವ ಎಲ್ಲ ಪದ್ಯಗಳೂ, ಪರಮಾತ್ಮನೇ ತಮ್ಮಲ್ಲಿದ್ದೂ ಹಾಡುವಂತೆ ಪ್ರೇರೇಪಿಸಿದನೆಂಬ ನಂಬಿಕೆ ಉಂಟಾಗುತ್ತದೆ. ಇದೇ ಭಕ್ತಿಯ ಉತ್ತುಂಗಸ್ಥಿತಿ. ಆಗ ಆಳ್ವಾರರು ತಾವು ಪರಮಾತ್ಮನ ಪ್ರಾರ್ಥನೆಯಲ್ಲಿ ಮತ್ತು ಅವನ ಸನ್ನಿಧಾನದಲ್ಲಿ ಇರುವಂತೆ ಭಾವಿಸುವರು. ಹೀಗೆ ಆಳ್ವಾರರು ಪರಭಕ್ತಿ, ಪರಜ್ಞಾನ, ಹಂತಗಳನ್ನು ಮುಟ್ಟಿ, ಕೊನೆಗೆ ಆತ್ಮ ಸಾಕ್ಷಾತ್ಕಾರ ಪಡೆಯುವರು. ಇಂತಹ ಅವರ ವಿಷ್ಣುಭಕ್ತಿಯು ಅದ್ಭುತವೂ, ಆಶ್ಚರ್ಯಕರವೂ ಆಗಿದೆ.

ಎಲ್ಲ ಆಳ್ವಾರರೂ ಇಂತಹ ವಿಷ್ಣು ಭಕ್ತಿಗೆ ಮಾರ್ಗದರ್ಶಕರಾಗಿದ್ದಾರೆ. ಇವರಲ್ಲಿ ನಮ್ಮಾಳ್ವಾರ್ ಮತ್ತು ತಿರುಮಂಗೈಯಾಳ್ವಾರ್ ಹಾಡಿರುವ ಪಾಶುರಗಳು ಅದ್ಭುತ ಮತ್ತು ಆಕರ್ಷಣೀಯ. 1200 ಕ್ಕೂ ಹೆಚ್ಚಿನ ಪದ್ಯಗಳನ್ನು ಇವರು ಹಾಡಿದ್ದಾರೆ. ಅನೇಕ ಅರ್ಚಾಮೂರ್ತಿಗಳನ್ನು ಕುರಿತು ಸ್ತೋತ್ರಮಾಡಿದ್ದಾರೆ. ತಿರುಪತಿ ಶ್ರೀನಿವಾಸನಂತೂ ಇವರಿಗೆ ಬಹು ಪ್ರಿಯವಾದ ದೇವರು. ಇವರ ಕಾಲವನ್ನು ಭಕ್ತಿಯುಗ ಎಂದು ಕರೆಯಬಹುದು. ಭಕ್ತಿ ಪ್ರಬೋಧನೆಗಾಗಿ, ಅದರ ಪ್ರಚಾರಕ್ಕಾಗಿ ಅಗತ್ಯವಾದ ವಿಷ್ಣುದೇವಾಲಯಗಳನ್ನು ನಿರ್ಮಾಣ ಮಾಡಿಸುವುದು, ಅರ್ಚಾವಿಗ್ರಹಗಳನ್ನು ಪ್ರತಿಷ್ಠಾಪಿಸುವುದು, ಅಂತಹ ವಿಗ್ರಹಗಳ ಪೂಜೆ, ಧ್ಯಾನ, ಸ್ಮರಣೆ, ಸದಾ ನಡೆಯುವಂತೆ ಮಾಡುವುದು — ಇತ್ಯಾದಿ ಕಾರ್ಯಗಳಲ್ಲಿ ಸದಾ ನಿರತರಾಗಿದ್ದ ಆಳ್ವಾರರು ವಿಷ್ಣುವಿನ ಅಂಶಾವತಾರಿಗಳಾಗಿದ್ದುಕೊಂಡು ಶ್ಲಾಘನೀಯವಾದ ಪವಿತ್ರ ಕಾರ್ಯ ನಡೆಸಿ, ಮಾನವಕೋಟಿಗೆ ಮಾರ್ಗದರ್ಶಕರಾಗಿದ್ದಾರೆ.

ಒಟ್ಟಿನಲ್ಲಿ ಎಲ್ಲ ಆಳ್ವಾರರೂ ಅದ್ವಿತೀಯ ವಿಷ್ಣು ಭಕ್ತರು. ಮಹಾವಿಷ್ಣುವನ್ನು ಸಾಕ್ಷಾತ್ಕರಿಸಿದ ಮಹಾತ್ಮರು. ಶ್ರೀರಂಗದ ಶ್ರೀರಂಗನಾಥನಲ್ಲಿ ಎಲ್ಲ ಆಳ್ವಾರರೂ ತಮ್ಮ ಅತೀವ ಭಕ್ತಿಯನ್ನು ವ್ಯಕ್ತಪಡಿಸುವ ಪಾಶುರಗಳನ್ನು ಹಾಡಿದ್ದಾರೆ.

"ಶ್ರೀರಂಗ ಕ್ಷೇತ್ರದಲ್ಲಿ ಪವಡಿಸಿರುವವನೇ, ಹಸಿರುಬಣ್ಣದ ಪರ್ವತದಂತಹ ದೇಹವನ್ನೂ, ಹವಳದಂತಹ ಅಧರವನ್ನೂ, ಕೆಂದಾವರೆಯಂತಹ ಕಣ್ಣುಗಳನ್ನೂ ಉಳ್ಳ, ಅಚ್ಯುತನೇ, ನಿತ್ಯಸೂರಿಗಳ ಪ್ರಭುವೇ, ಗೋಕುಲದ ಚಿಗುರೇ, ನಿನ್ನನ್ನು ಬಿಟ್ಟು ನನಗೆ ಬೇರೆ ದೇವರಿಲ್ಲ" ಎಂದು ನಮ್ಮಾಳ್ವಾರವರು ಭಕ್ತಿಯಿಂದ ಹಾಡಿದ್ದಾರೆ ಹೀಗೆ ಆಳ್ವಾರರ ಭಕ್ತಿಭಾವನೆಯ ಪ್ರವಾಹ ಹೊರಹೊಮ್ಮಿದೆ ಮತ್ತು ಎಲ್ಲರಲ್ಲಿಯೂ ಭಕ್ತಿ ಪ್ರಚೋದನೆಯಾಗುವಂತೆ ಮಾಡುತ್ತದೆ. ಆಳ್ವಾರರ ದಿವ್ಯಪ್ರಬಂಧಗಳು ನಿಜವಾಗಿ ಭಕ್ತಿಯ ಭಂಡಾರವೇ ಆಗಿವೆ. ಈ ಭಂಡಾರದಲ್ಲಿರುವ ಶ್ರೇಷ್ಠ ರತ್ನಗಳನ್ನೂ ಆಣಿಮುತ್ತುಗಳನ್ನೂ ಭಕ್ತರು ಆರಿಸಿಕೊಂಡು, ಪರಮಾತ್ಮನನ್ನು ಪ್ರಾರ್ಥಿಸಿ ಕೃತಾರ್ಥರಾಗಬಹುದು. ಹಾಗಾಗಬೇಕೆಂಬುದೇ ಎಲ್ಲ ಆಳ್ವಾರರ ಉದ್ದೇಶ ಮತ್ತು ಗುರಿಯಾಗಿತ್ತು. ★

# ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರಿಗೆ

# ಜ್ಞಾನಪೀಠ ಪ್ರಶಸ್ತಿ

ಭಾರತದ ಸಾಹಿತ್ಯ ಜಗತ್ತಿನ ಅತ್ಯಂತ ಪ್ರತಿಷ್ಠಾತ್ಮಕವೂ, ಅತ್ಯ ಮೂಲ್ಯವೂ ಆದ ಜ್ಞಾನಪೀಠ ಪ್ರಶಸ್ತಿ 1983 ನೇ ಸಾಲಿನಲ್ಲಿ ಕನ್ನಡದ ಸಣ್ಣ ಕತೆಗಳ ಜನಕ ಎಂದು ಖ್ಯಾತರಾದ ಶ್ರೀನಿವಾಸ ಕಾವ್ಯನಾಮದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯ ಅವರಿಗೆ ದೊರೆತಿದೆ.

19 ವರ್ಷದ ಹಿಂದೆ ಆರಂಭವಾದ ಈ ಸಾಹಿತ್ಯ ಪ್ರಶಸ್ತಿ ವಿಜೇತರಲ್ಲಿ ಡಾ॥ ಮಾಸ್ತಿಯವರು 19 ನೆಯವರೂ, ಕನ್ನಡದಲ್ಲಿ ನಾಲ್ಕನೆಯವರೂ ಆಗಿದ್ದಾರೆ. ಉಳಿದ ಮೂವರೆಂದರೆ ಡಾ॥ ಕೆ. ವಿ. ಪುಟ್ಟಪ್ಪ (ಕುವೆಂಪು), ಕೀರ್ತಿಶೇಷ ಡಾ॥ ದತ್ತಾತ್ರೇಯ ರಾಮಚಂದ್ರ ಬೇಂದ್ರೆ, (ಅಂಬಿಕಾತನಯ ದತ್ತ) ಡಾ॥ ಕೆ. ಶಿವರಾಮ ಕಾರಂತ (ಕಾರಂತ)

94 ವರ್ಷದ ಜ್ಞಾನವೃದ್ಧ ಡಾ॥ ಮಾಸ್ತಿಯವರು ಕನ್ನಡ ಸಾಹಿತ್ಯದ 20 ನೇ ಶತಕದ ಪುನರುತ್ಥಾನದಲ್ಲಿ ಪ್ರಮುಖ ಪಾತ್ರಧಾರಿಗಳಾಗಿ, ಸಣ್ಣ ಕತೆ, ಕವನ, ನಾಟಕ, ವಿಮರ್ಶೆ, ಕಾದಂಬರಿ ಕ್ಷೇತ್ರಗಳಲ್ಲಿ ಸಮಾನ ಯಶಸ್ಸನ್ನು ಪಡೆದವರಾಗಿದ್ದಾರೆ ಎಂದು ಜ್ಞಾನಪೀಠದ ಪ್ರಶಸ್ತಿ ವರದಿ ತಿಳಿಸಿದೆ.

ಡಾ॥ ಮಾಸ್ತಿಯವರ ಐತಿಹಾಸಿಕ ಕಾದಂಬರಿ 'ಚಿಕವೀರ ರಾಜೇಂದ್ರ' ಕೃತಿಯು ಸ್ವಾತಂತ್ರ್ಯೋತ್ತರ ಭಾರತೀಯ ಸಾಹಿತ್ಯದಲ್ಲಿ ಅತ್ಯುತ್ತಮವೆಂದು ತೀರ್ಮಾನಿಸಿ ಪ್ರಶಸ್ತಿಯನ್ನು ನೀಡಲಾಗಿದೆಯೆಂದೂ ವರದಿ ತಿಳಿಸಿದೆ. ಚಿಕವೀರರಾಜೇಂದ್ರ ಕೊಡಗಿನ ಇತಿಹಾಸದ ಒಂದು ಘಟ್ಟವನ್ನು ಯಶಸ್ವಿಯಾಗಿ ಚಿತ್ರಿಸಿದೆ. ಈ ಕೃತಿಯ ಮೊದಲಿನಿಂದ ಕಡೆಯವರೆಗಿನ ಏಕತ್ರವಾದ ಪರಿಪಕ್ವವಾದ ನಿರೂಪಣೆ, ಮೂಲಭೂತ ನೈತಿಕ ಮೌಲ್ಯಗಳ ಅವಧಾರಣೆ, ಐತಿಹಾಸಿಕಬುದ್ಧಿ ಮತ್ತತೆಯ ಸಂವಹನಗಳಿಂದಾಗಿ ಈ ಕೃತಿಯನ್ನು ಶ್ರೇಷ್ಠ ಎನ್ನಲಾಗಿದೆ.

1920 ರಲ್ಲಿ ಮೊತ್ತ ಮೊದಲಿಗೆ 'ಕೆಲವು ಸಣ್ಣ ಕಥೆಗಳು' ಕೃತಿಯ ಪ್ರಕಟನೆಯಿಂದಾಗಿ ಬೆಳಕು ಕಂಡ ಮಾಸ್ತಿಯವರು ಈ ವರೆಗೆ 118ಕ್ಕೂ ಮಿಕ್ಕಿದ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವುಗಳಲ್ಲಿ 17 ಕವನ ಸಂಕಲನಗಳು, 18 ನಾಟಕಗಳೂ, 17 ಸಣ್ಣಕಥಾ ಸಂಗ್ರಹಗಳೂ, 46 ಜೀವನ ಚರಿತ್ರೆ, ವಿಮರ್ಶೆ ಆತ್ಮಚಿಂತೆ ಮೊದಲಾದ ಕೃತಿಗಳೂ ಸೇರಿವೆ. ಶ್ರೀಯುತರು ಷೇಕ್ಸ್‌ಪಿಯರನನ್ನೂ ಅನುವಾದಿಸಿದ್ದಾರೆ. ಮೂರು ಕಾದಂಬರಿಗಳೂ ಇವೆ. ಅವುಗಳಲ್ಲಿ ಚಿಕವೀರರಾಜೇಂದ್ರ ಸಹ ಒಂದು.

ಮೂಲಭೂತವಾಗಿ 'ಶ್ರೀನಿವಾಸ'ರು ಕಥೆಗಾರರು. ಅವರ ಕವನಗಳಲ್ಲೂ ಸಹ ಅತ್ಯಂತ ಯಶಸ್ವಿಯಾದವು ಅವರ ಕಥನ ಕವನಗಳು. ಅವರ ಹೆಚ್ಚಿನ ಕಥೆಗಳು ಗ್ರಾಮೀಣ ಜೀವನದ ಪ್ರೇಮ, ಕಷ್ಟಗಳನ್ನೂ ಸುಖ ಸಂತೋಷಗಳನ್ನೂ ಮುಗ್ಧತೆಯನ್ನೂ ವಿಧವಿಧವಾಗಿ, ವಿವರವಾಗಿ ಬಿಡಿಸಿ ರೂಪಿಸುತ್ತವೆ.

ಅವರಿಗೆ ಕ್ರಾಂತಿಯಲ್ಲಿ ಆಸಕ್ತಿಯಿಲ್ಲ. ಸಂಸ್ಕೃತಿ, ಪರಂಪರೆಯಲ್ಲಿ ನಂಬಿಕೆಯಿರುವ ಸಾತ್ವಿಕ ಚೇತನ, ಅದೇ ಅವರ ಕೃತಿಗಳಲ್ಲೂ ಪ್ರತಿಬಿಂಬಿತವಾಗಿದೆ.

1891 ರಲ್ಲಿ ಹುಟ್ಟಿದ ಮಾಸ್ತಿಯವರು ಮದರಾಸಿನಲ್ಲಿ ಆಂಗ್ಲ ಭಾಷೆಯ ಎಂ.ಎ. ಪದವಿಯನ್ನು ಪಡೆದ ನಂತರ ಮೈಸೂರು ಸಂಸ್ಥಾನದ ಸೇವೆಯಲ್ಲಿ ಸೇರಿ ಬಹುಪ್ರಖ್ಯಾತರಾದವರು. 1942 ರಲ್ಲಿ 'ರಾಜಸೇವಾ ಪ್ರಸಕ್ತ' ಬಿರುದನ್ನೂ ಪಡೆದರು. ಅವರ ಸಾಹಿತ್ಯ ಸೇವೆಯ ಹಿರಿಮೆಯಿಂದಾಗಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯೂ, ಸಾಹಿತ್ಯ ಅಕ್ಯಾಡಮಿ ಸದಸ್ಯತ್ವವೂ ಅವರದಾಗಿತ್ತು.

ಸುಮಾರು ಎಪ್ಪತ್ತು ವರ್ಷಗಳ ಸಾಹಿತ್ಯ ಸೇವೆಯಲ್ಲಿ ಮಾಸ್ತಿಯವರು ಬರೆದದ್ದು ಎಷ್ಟೋ ಬರೆಯಿಸಿದ್ದೂ ಅಷ್ಟೇ ಗುಣಮಟ್ಟದ್ದು ಎನ್ನಬೇಕು. 'ಜೀವನ' ಪತ್ರಿಕೆಯ ಸಂಪಾದಕರಾಗಿ ಅನೇಕ ಯುವ ಪೀಳಿಗೆಯ ತರುಣ ಸಾಹಿತಿಗಳನ್ನು ಅವರು ಪ್ರೋತ್ಸಾಹಿಸಿದರು. ಅಂತಹ ಶ್ರೇಷ್ಠರಲ್ಲಿ ಕೆಲವರೆಂದರೆ ಕೀರ್ತಿಶೇಷ ಡಾ॥ ಜಿ. ಪಿ. ರಾಜರತ್ನಂ, ಡಾ॥ ಜಿ. ಎಸ್. ಶಿವರುದ್ರಪ್ಪ ಮೊದಲಾದವರು. ಕನ್ನಡಸಾಹಿತ್ಯ ಪರಿಷದಧ್ಯಕ್ಷ ಡಾ॥ ಹಂ.ಪ.ನಾ. ಅವರೆಂದಂತೆ ಕವಿಯಾಗಿ, ವಿಮರ್ಶಕರಾಗಿ, ಕಾದಂಬರಿಕಾರರಾಗಿ, ಕತೆಗಾರರಾಗಿ ಮಾಸ್ತಿಯವರು ಅಸಮಾನರು ಹಾಗೂ ಕನ್ನಡವನ್ನು ಅತ್ಯುಚ್ಚ ಮಟ್ಟಕ್ಕೇರಿಸಿದವರಲ್ಲಿ ಅವರೊಬ್ಬರು. ಕನ್ನಡಪ್ರಭ ಸಂಪಾದಕ ಶ್ರೀ ಖಾದ್ರಿಶಾಮಣ್ಣನವರ ಅಭಿಪ್ರಾಯದಂತೆ ಡಾ॥ ಮಾಸ್ತಿಯವರು "ಭಾರತೀಯ ಸಂಸ್ಕೃತಿಯ ಹಿರಿಮೆಯೆಲ್ಲದರ ಪ್ರತೀಕ. ಪ್ರಾಚೀನರಂತೆ ಕಂಡರೂ ಆಧುನಿಕತೆಯನ್ನು ಹದವಾಗಿ ಮೈಗೂಡಿಸಿಕೊಂಡವರು. ಹಳೆಯದನ್ನು ತೊರೆಯದೆಯೇ ಹೊಸ ವಿಚಾರಗಳಿಗೆ ಮೆರುಗು ಕೊಡಬಹುದೆನ್ನಲು ಅವರೇ ಜೀವಂತ ಸಾಕ್ಷಿ."

ಕನ್ನಡದ ಆಸ್ತಿಯೆಂದು ಹೆಸರಾಗಿರುವ ಮಾಸ್ತಿಯವರಿಗೆ ಪ್ರಶಸ್ತಿಯ ಹಣವನ್ನು (ಒಂದೂವರೆ ಲಕ್ಷರೂ) ಇತರರ ಹಾಗೂ ತಮ್ಮ ಕೃತಿಗಳನ್ನು ಪ್ರಕಟಿಸಲು ಬಳಸಿ ಕನ್ನಡದ ಸಾಹಿತ್ಯವನ್ನು ಮತ್ತಷ್ಟು ಶ್ರೀಮಂತಗೊಳಿಸುವ ಅಪೇಕ್ಷೆ. ★

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ. ತಿರುಪತಿ.

## ಆಭರಣಗಳ ಹರಾಜು

ತಿ. ತಿ. ದೇವಸ್ಥಾನಗಳ ಖಜಾನೆಯಲ್ಲಿ ಕಳೆದ ಎರಡು ದಶಕಗಳಿಂದ ಸಂಗ್ರಹಿತವಾದ 600 ಕಿಲೋಗ್ರಾಂ ಕಲ್ಲುಗಳ ಆಭರಣಗಳನ್ನು ಹಂತ ಹಂತವಾಗಿ ಹರಾಜಿನ ಮೂಲಕ ಮಾರಾಟ ಮಾಡಬೇಕೆಂದು ತೀರ್ಮಾನಿಸಿದಂತೆಯೇ ಸುಮಾರು 74 ಕಿಲೋಗ್ರಾಂ ತೂಕದ ಹರಳುಗಳ ಆಭರಣಗಳನ್ನು ಈಚೆಗೆ ಐದು ದಿನಗಳ ಕಾಲ ಹರಾಜಿನಲ್ಲಿ ಮಾರಾಟ ಮಾಡಲಾಯಿತು. ಇದರಿಂದಾಗಿ ತಿ. ತಿ. ದೇವಸ್ಥಾನಗಳು ಒಂದು ಕೋಟಿ ಮೂರು ಲಕ್ಷ ರೂಪಾಯಿಗಳನ್ನು ಗಳಿಸಿದಂತಾಯಿತು. ಈ ಬಾರಿಯ ಹರಾಜಿನಲ್ಲಿ 405 ಗುಂಪಿನಲ್ಲಿ ಆಭರಣಗಳನ್ನು ಹರಾಜು ಮಾಡಲಾಯಿತೆಂದೂ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮಹಾರಾಷ್ಟ್ರಗಳಿಂದ 250 ಮಂದಿ ಬಿಡ್ ದಾರರು ಈ ಹರಾಜಿನಲ್ಲಿ ಭಾಗ ವಹಿಸಿದರೆಂದೂ ವರದಿಗಳು ತಿಳಿಸುತ್ತವೆ.

ಕಲ್ಲು ಹರಳುಗಳಿಂದ ಕೂಡಿದ ವಿಧವಿಧವಾದ ನಮೂನೆಯ ಓಲೆಗಳು, ಹಾರಗಳು, ಲಾಕೆಟ್ ಗಳು, ಬಳೆಗಳು, ಪಿನ್ನುಗಳು ಮೊದಲಾದವುಗಳಿಂದ ಕೂಡಿದ ಹರಾಜಿನ ಆಭರಣಗಳನ್ನು ಗಾಜಿನ ಪೆಟ್ಟಿಗೆಯಲ್ಲಿಟ್ಟು ತೋರಿಸಲಾಗುತ್ತಿತ್ತು. ತಿ. ತಿ. ದೇ ಉಪ ಕಾರ್ಯನಿರ್ವಹಣಾಧಿಕಾರಿ ಶ್ರೀ ವಾಸುದೇವ ನಾಯುಡು ಹರಾಜನ್ನು ಕೂಗುತ್ತ ಬಿಡ್ ದಾರರನ್ನು ಪ್ರೋತ್ಸಾಹಿಸುತ್ತಿರಲು, ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ, ಆರ್ಥಿಕ ಸಲಹಾಧಿಕಾರಿ ಶ್ರೀ ಕೃಷ್ಣಸ್ವಾಮಿ, ತಿ. ತಿ. ದೇ. ಬೋರ್ಡ್ ಸದಸ್ಯರು ಶ್ರೀ ಜಿ. ಮಾಧವರೆಡ್ಡಿ, ಶ್ರೀ ಯಾದಗಿರಿ ಶ್ರೀ ಟಿ. ರುದ್ರಯ್ಯ, ಶ್ರೀಮತಿ ಎಸ್. ರಾಜಕುಮಾರಿ ಅವರು ಹರಾಜನ್ನು ನಿರ್ವಹಿಸಿದರು.

## ತಿರುಮಲೆಯಲ್ಲಿ ಹೆಚ್ಚಿನ ಸೌಕರ್ಯಗಳು

ತಿರುಮಲೆಯಲ್ಲಿ ಹೆಚ್ಚುತ್ತಿರುವ ಯಾತ್ರಿಕರ ಸಂದಣಿಯಿಂದಾಗಿ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಲು ಪ್ರಯತ್ನಿಸಲಾಗುತ್ತಿದೆ. ವಿಶೇಷ ಪ್ರವೇಶದ ಕ್ಯೂ ಬಳಿಯಲ್ಲಿ ಒಂದು, ಹಾಗೂ ತಿರುಮಲೆಯ ಬಸ್‌ಸ್ಟಾಂಡಿನಲ್ಲಿ ಎರಡು ಕುಡಿಯುವ ನೀರಿನ ಕೇಂದ್ರಗಳನ್ನು ಸ್ಥಾಪಿಸಲಾಗುತ್ತದೆ. ಈಚೆಗೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು, ಆರ್. ಟಿ. ಸಿ ವಿಭಾಗಾಧಿಕಾರಿ ಪ್ರಭಾಕರರಾವ್ ಹಾಗೂ ತಿರುಮಲೆ ಡಿಪೋಮ್ಯಾನೇಜರ್ ಅವರೊಂದಿಗೆ ಪಾಪವಿನಾಶಿನಿಯನ್ನು ಸಂದರ್ಶಿಸಿ ಯಾತ್ರಿಕರ

# ವಾರ್ತಾಲಹರಿ

ಅನುಕೂಲಗಳನ್ನು ಚರ್ಚಿಸಿದರು. ಪಾಪವಿನಾಶಿನಿಯಲ್ಲೂ ಸಹ ಸರತಿಯಸಾಲನ್ನು ಏರ್ಪಡಿಸಿ ನೀರಿನ ಸೌಕರ್ಯಗಳನ್ನು ಕಲ್ಪಿಸಬೇಕೆಂದು ಕಾರ್ಯನಿರ್ವಹಣಾಧಿಕಾರಿ ಸೂಚಿಸಿದರು. ಇಷ್ಟಿನ ಬಸ್ ಸ್ಟಾಂಡಿನಲ್ಲಿ ಸಿಮೆಂಟ್ ಬೆಂಚುಗಳನ್ನು ಏರ್ಪಾಡು ಮಾಡಬೇಕೆಂದೂ ಆದೇಶ ನೀಡಿದರು. ತಿರುಮಲೆಯ ಬಸ್‌ಸ್ಟಾಂಡಿನಲ್ಲೂ ಸರತಿಯ ಸಾಲಿಗೆ ಎದುರಾಗಿ ನೆರಳನ್ನು ಏರ್ಪಡಿಸಿ ಸಿಮೆಂಟ್ ಬೆಂಚ್‌ಗಳನ್ನು ಹಾಕಬೇಕೆಂದೂ, ಸರತಿಯ ಸಾಲಿನ ಹಳೆಯ ವಿದ್ಯುತ್‌ಪಂಕಗಳನ್ನು ತೆಗೆದು ಹೊಸ ಪಂಕಗಳನ್ನು ಹಾಕಬೇಕೆಂದೂ ಆದೇಶಗಳನ್ನು ನೀಡಿದರು. ಯಾತ್ರಿಕರ ಸಂದಣಿ ಮುಂದೆ ಮುಂದೆ ಇನ್ನೂ ಹೆಚ್ಚುವ ಸಂಭವವಿದ್ದು ಅದಕ್ಕಾಗಿ ಹೊಸ ಬಸ್‌ಸ್ಟಾಂಡ್ ನಿರ್ಮಾಣಕ್ಕೆ ಟೆಂಡರ್‌ಗಳನ್ನು ಕರೆಯಲಾಗಿದೆ ಎಂದೂ ಕಾರ್ಯನಿರ್ವಹಣಾಧಿಕಾರಿಗಳು ತಿಳಿಸಿದರು. ಇದುವರೆಗೆ ತಿರುಮಲೆಯ ಘಾಟ್ ರಸ್ತೆಯಲ್ಲಿ ನೂರ ಹನ್ನೊಂದು ಬಸ್‌ಗಳು ನಡೆಯುತ್ತಿದ್ದವೆಂದೂ ಈಗ ಇವುಗಳ ಸಂಖ್ಯೆಯನ್ನು 127 ಕ್ಕೆ ಹೆಚ್ಚಿಸಲಾಗಿದೆಯೆಂದೂ ವಿಭಾಗಾಧಿಕಾರಿ ಶ್ರೀ ಪ್ರಭಾಕರರಾವ್ ತಿಳಿಸಿದರು.

## ಪುರಾಣ ಪ್ರಬೋಧ ಪರೀಕ್ಷೆಗಳಲ್ಲಿ ಬಾಲಕಿಯರಿಗೆ ಪ್ರಥಮ ಸ್ಥಾನಗಳು

ಜನವರಿ ತಿಂಗಳಿನಲ್ಲಿ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಹಿಂದೂ ಧರ್ಮ ರಕ್ಷಣ ಸಂಸ್ಥೆ ನಿರ್ವಹಿಸಿದ ಪುರಾಣಪ್ರಬೋಧ ಪರೀಕ್ಷೆಗಳಲ್ಲಿ ಆಂಧ್ರಪ್ರದೇಶದ 385 ಪ್ರೌಢಶಾಲೆಗಳ 15888 ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದು ಅವರಲ್ಲಿ 10694 ಮಂದಿ ಉತ್ತೀರ್ಣರಾಗಿದ್ದಾರೆ. ಇಲ್ಲಿ ಬಾಲಕಿಯರದೇ ಮೇಲುಗೈ. ಪ್ರಥಮ ಸ್ಥಾನವನ್ನು ಮೆಹಬೂಬ್ ನಗರ್ ಜಿಲ್ಲೆಯ ತಾಂಡ್ರಗ್ರಾಮದ ವಿದ್ಯಾರ್ಥಿನಿ ಕೆ. ಪ್ರಭಾವತಿ, ದ್ವಿತೀಯಸ್ಥಾನವನ್ನು ಚಿತ್ತೂರು ಜಿಲ್ಲೆಯ ಗಂಗಾಧರ ನೆಲ್ಲೂರಿನ ವಿದ್ಯಾರ್ಥಿನಿ ಪಿ. ರಾಧಿಕ, ತೃತೀಯಸ್ಥಾನವನ್ನು ಪೂರ್ವಗೋದಾವರೀ ಜಿಲ್ಲೆಯ ಪೋಡಗಟ್ಲ ಪಲ್ಲಿಯ ವಿದ್ಯಾರ್ಥಿನಿ ಗಾದಿರಾಜುಲ ಪದ್ಮಜ ಅವರು ಪಡೆದಿದ್ದಾರೆ. ಒಟ್ಟು 693 ಮಂದಿ ವಿದ್ಯಾರ್ಥಿನಿಯರು ಪ್ರಥಮ ದರ್ಜೆಯಲ್ಲೂ 2773 ಮಂದಿ ದ್ವಿತೀಯ ದರ್ಜೆಯಲ್ಲೂ ಉತ್ತೀರ್ಣರಾಗಿದ್ದಾರೆ.

## ವಿದೇಶಗಳಲ್ಲಿನ ಹಿಂದೂ ದೇವಾಲಯಗಳಿಗಾಗಿ ತಿ. ತಿ. ದೇವಸ್ಥಾನಗಳ ನೆರವು

ವಿದೇಶಗಳಲ್ಲಿನ ಹಿಂದೂ ದೇವಾಲಯಗಳ ನಿರ್ಮಾಣದಲ್ಲಿ ತಿ. ತಿ. ದೇವಸ್ಥಾನಗಳು ನೆರವು ನೀಡುವ ಒಂದು ಯೋಜನೆಗೆ ಸರ್ಕಾರ ಅಂಗೀಕಾರ ನೀಡಿದೆ.

ವಿದೇಶಗಳಲ್ಲಿನ ಹಲವಾರು ಹಿಂದೂ ಸಂಸ್ಥೆಗಳು ತಮ್ಮ ತಮ್ಮ ಪ್ರಾಂತ್ಯಗಳಲ್ಲಿ ಹಿಂದೂ ದೇವಾಲಯ ನಿರ್ಮಾಣಕ್ಕಾಗಿ ಆರ್ಥಿಕ ನೆರವು ನೀಡಬೇಕೆಂದು ಆಗಾಗ್ಗೆ ತಿ. ತಿ. ದೇವಸ್ಥಾನಗಳನ್ನು ಕೋರುತ್ತಿದ್ದುದರ ಹಿನ್ನೆಲೆಯಲ್ಲಿ ತಿ. ತಿ. ದೇ. ಟ್ರಸ್ಟ್‌ಬೋರ್ಡ್ ಈ ನಿರ್ಣಯವನ್ನು ತೆಗೆದುಕೊಂಡು ಹಲವು ಹನ್ನೊಂದು ಕೋನಗಳಿಂದ ಪರಿಸ್ಥಿತಿಯನ್ನು ಅಧ್ಯಯನ ಮಾಡಿ ಒಂದು ಯೋಜನೆಯನ್ನು ತಯಾರಿಸಿತು.

ಇದರಂತೆ ವಿದೇಶಗಳಲ್ಲಿನ ಹಿಂದೂ ದೇವಾಲಯ ನಿರ್ಮಾಣದಲ್ಲಿ ನೆರವು ನೀಡಲು ಮೂರುಕೋಟಿ ರೂಪಾಯಿಗಳ ರಿವಾಲ್ವಿಂಗ್ ಫಂಡ್ ಒಂದನ್ನು ಸ್ಥಾಪಿಸಬೇಕೆಂದು ತೀರ್ಮಾನಿಸಲಾಗಿದ್ದು, ಒಂದು ಕೋಟಿ ರೂಗಳನ್ನು ಕೂಡಲೇ ಬ್ಯಾಂಕಿಗೆ ಜಮಕಟ್ಟಲಾಗಿದೆ. ಈ ಮೂಲಧನದಿಂದ ವಿದೇಶಗಳಲ್ಲಿನ ಹಿಂದೂ ದೇವಾಲಯ ನಿರ್ಮಾಣಕ್ಕಾಗಿ 15 ಲಕ್ಷರೂಪಾಯಿಗಳಿಗೆ ಮೀರದಂತೆ, ವಸ್ತುರೂಪದಲ್ಲಿ ಸಾಲದ ನೆರವು ನೀಡಲು ಬೋರ್ಡ್ ತೀರ್ಮಾನಿಸಿದೆ. ವಿದೇಶೀ ದೇವಾಲಯಗಳಲ್ಲಿ ಅಗತ್ಯವಾದ ಶಿಲ್ಪಗಳನ್ನಾಗಲೀ, ದೇವಾಲಯ, ಶಿಖರ ನಿರ್ಮಾಣಾದಿಗಳಲ್ಲಿ ಅಗತ್ಯವಾದ ತಿ. ತಿ. ದೇ. ಶಿಲ್ಪಿಗಳ ಸೇವೆಯ ರೂಪದಲ್ಲಿಯಾಗಲೀ ಈ ನೆರವನ್ನು ನೀಡಲಾಗುವುದು. ಈ ಮೊತ್ತವನ್ನು ಬಡ್ಡಿರಹಿತವಾದ ಸುಲಭ ಕಂತುಗಳಲ್ಲಿಯಾಗಲೀ, ವೈದ್ಯಕೀಯ ಪರಿಕರಗಳ ರೂಪದಲ್ಲಿಯಾಗಲೀ ಹಿಂದಿರುಗಿಸಬಹುದು.

ಈ ಯೋಜನೆಯನ್ನು ಅಂಗೀಕರಿಸಬೇಕೆಂದು ಸರ್ಕಾರವನ್ನು ತಿ. ತಿ. ದೇ. ಬೋರ್ಡ್ ಕೋರಿದ್ದಿತು. ಸರ್ಕಾರದ ಅನುಮೋದನೆಯಿಂದಾಗಿ ವಿದೇಶಗಳಲ್ಲಿ ವಿಶೇಷವಾಗಿ ಹಿಂದೂ ದೇವಾಲಯಗಳು ನಿರ್ಮಾಣವಾಗುವ ಸಾಧ್ಯತೆಗಳಿವೆ.

## ತಿ. ತಿ. ದೇ ಉದ್ಯೋಗಿಗಳಿಗೆ ಸ್ವಂತ ಮನೆಗಳು

'ನಿಮ್ಮ ಸ್ವಂತ ಮನೆ' ಎನ್ನುವ ಯೋಜನೆಯಂತೆ ತಿ. ತಿ. ದೇವಸ್ಥಾನದ ಉದ್ಯೋಗಿಗಳಿಗೆ ಎರಡು ಕೋಟಿ ಮೂವತ್ತೆರಡು ಲಕ್ಷರೂಗಳ ವೆಚ್ಚದಲ್ಲಿ

## 1984

## ಆಗಸ್ಟ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 1. | ಬುಧವಾರ | ನಾಗಪಂಚಮಿ, ಗರುಡಪಂಚಮಿ. |
| 7. | ಮಂಗಳವಾರ | ತಿರುಮಲೆ ಶ್ರೀವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ ಆರಂಭ. |
| 9. | ಗುರುವಾರ | ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ – ಸಮಾಪ್ತಿ. |
| 10. | ಶುಕ್ರವಾರ | ವರಲಕ್ಷ್ಮೀವ್ರತ. |
| 11. | ಶನಿವಾರ | ಋಕ್, ಯಜುರ್ವೇದ ಉಪಾಕರ್ಮ, ಹಯಗ್ರೀವ – ಜಯಂತಿ. |
| 13. | ಸೋಮವಾರ | ರಾಘವೇಂದ್ರಸ್ವಾಮಿಗಳ ಆರಾಧನೆ. |
| 15. | ಬುಧವಾರ | ಸ್ವಾತಂತ್ರ್ಯದಿನ. |
| 20. | ಸೋಮವಾರ | ಗೋಕುಲಾಷ್ಟಮಿ. |
| 21. | ಮಂಗಳವಾರ | ಶ್ರೀಕೃಷ್ಣ ಜಯಂತಿ, ತಿರುಮಲೆಯಲ್ಲಿ ಉಟ್ಲ ಉತ್ಸವ. |
| 28. | ಮಂಗಳವಾರ | ಕಲ್ಕಿ ಜಯಂತಿ. |
| 29. | ಬುಧವಾರ | ಸಾಮವೇದ, ಉಪಾಕರ್ಮ, ವರಾಹ ಜಯಂತಿ. |
| 30. | ಗುರುವಾರ | ವಿನಾಯಕ ಚತುರ್ಥಿ. |

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ — ಆಗಸ್ಟ್ 1984**

**ಶ್ರೀಕೃಷ್ಣ ಜನ್ಮಲೀಲಾ ರಹಸ್ಯ**
– ನರಸಿಂಹ ಬ್ರಹ್ಮಚಾರಿ

**ಯಾದವಾಭ್ಯುದಯ**
– ಡಿ. ಕೃಷ್ಣ ಅಯ್ಯಂಗಾರ್

**ಕೃಷ್ಣಾವತಾರ ವೈಭವ**
ಎಸ್. ನರಸಿಂಹಾಚಾರ್ಯ

**ಪಂಪ ಭಾರತದ ಶಿಶುಪಾಲವಧೆ**
– ಡಾ॥ ಎನ್. ಅನಂತರಂಗಾಚಾರ್ಯ

**ಕುಮಾರವ್ಯಾಸನ ಕೃಷ್ಣರಾಯಭಾರ**
– ಎನ್. ಎಸ್. ಗದಗಕರ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಬರೆಯಿರಿ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯ ಬೇಕು.

ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

351 ಮನೆಗಳನ್ನು ನಿರ್ಮಿಸಬೇಕೆಂದು ಆಡಳಿತ ನಿರ್ವಾಹಕ ಮಂಡಳಿ ತೀರ್ಮಾನಿಸಿದೆಯೆಂದು ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅವರು ತಿಳಿಸಿದರು. ತಿರುಪತಿಯ ಸಮೀಪದ ಅವಿಲಾಲ ಗ್ರಾಮದ ಬಳಿ ಈ ಮನೆಗಳನ್ನು ನಿರ್ಮಿಸಲಾಗುವು ದೆಂದೂ, ಈ ನಿರ್ಣಯವನ್ನು ತಿ. ತಿ. ದೇ. ಬೋರ್ಡ್ ಆತಿತ್ವರೆಯಲ್ಲಿಯೇ ಅನುಮೋದಿಸುವು ದೆಂದೂ ಅವರು ನುಡಿದರು.

ತಿರುಪತಿಯ ಶ್ರೀ ಪದ್ಮಾವತೀ ಮಹಿಳಾ ವಿಶ್ವ ವಿದ್ಯಾಲಯಕ್ಕೆ ಮೂವತ್ತೆರಡು ಲಕ್ಷ ರೂಗಳ ಬೆಲೆಯ 131 ಎಕರೆ ಭೂಮಿಯನ್ನು ನೀಡಲು ತೀರ್ಮಾನಿಸಲಾಗಿದೆಯೆಂದೂ, ಸರ್ಕಾರ ಇದಕ್ಕೆ ಬದಲಾಗಿ ಅಷ್ಟೇ ಬೆಲೆಯ ಭೂಮಿಯನ್ನು ನಷ್ಟ ಪರಿಹಾರವಾಗಿ ನೀಡಲು ಒಪ್ಪಿದೆಯೆಂದೂ ಅವರು ತಿಳಿಸಿದರು.

ಕಪಿಲತೀರ್ಥದಲ್ಲಿ ಅರ್ಚಕರಿಂದ ನಿರ್ವಹಿ ಸಲ್ಪಡುತ್ತಿರುವ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯದ ಜೀರ್ಣೋದ್ಧಾರ ಮಾಡಲೂ, ಶ್ರೀನಿವಾಸ ಮಂಗಾಪುರದ ದೇವಾಲಯದ ದಕ್ಷಿಣ ದಿಕ್ಕಿನಲ್ಲಿ ಪುಷ್ಕರಿಣಿಯನ್ನು ನಿರ್ಮಿಸಲೂ ತೀರ್ಮಾನಿಸಲಾಗಿದೆ ಎಂದು ಅವರು ನುಡಿದರು.

ಜುಲೈ ತಿಂಗಳಿನಲ್ಲಿ ಶ್ರೀನಿವಾಸ ಮಂಗಾಪುರ ದಲ್ಲಿ ನಡೆಯುವ ಸಾಕ್ಷಾತ್ಕಾರ ವೈಭವದ ಉತ್ಸವದಲ್ಲಿ ಮೂರು ದಿನಗಳ ಕಾಲ ಶ್ರೀ ವೆಂಕಟೇಶ್ವರಸ್ವಾಮಿ ಉತ್ಸವ ವಿಗ್ರಹಗಳ ಮೆರವಣಿಗೆಯನ್ನು ನಡೆಸಬೇಕೆಂದೂ, ಪ್ರತಿತಿಂಗಳ ಶ್ರವಣ ನಕ್ಷತ್ರದ ದಿನದಂದು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ಶ್ರೀನಿವಾಸ ನನ್ನು ಉತ್ಸವದಲ್ಲಿ ಉಭಯನಾಚ್ಚಿಯಾರ ರೊಂದಿಗೆ ಮೆರವಣಿಗೆ ಮಾಡಲೂ ತೀರ್ಮಾನಿಸ ಲಾಗಿದೆಯೆಂದು ಅವರು ತಿಳಿಸಿದರು. ರಾಷ್ಟ್ರದ ಐವತ್ತು ಗ್ರಾಮಗಳಲ್ಲಿ ಒಟ್ಟು 25 ಲಕ್ಷ ರೂಗಳ ವೆಚ್ಚದಲ್ಲಿ ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆಯೆಂದೂ ಅವರು ತಿಳಿಸಿದರು.

—

### ರಕ್ಷಾಪತ್ರ ಚಿತ್ರಸೂಚಿ

ಮುಖಪುಟ : ಸರ್ವದೇವಸ್ವರೂಪೀ ವೆಂಕಟೇಶ.
ಚಿತ್ರ – ಶ್ರೀ ಸತ್ಯನಾರಾಯಣ

ಹಿಂಬದಿಯ ಪುಟ: ತಿರುಮಲೆಯಲ್ಲಿ ಪವಿತ್ರೋತ್ಸವ

ಒಳಪುಟಗಳಲ್ಲಿ : ನೆಲ್ಲೂರಿನಲ್ಲಿ ತಿ. ತಿ. ದೇ. ಸ್ವರ್ಣೋತ್ಸವ ಹಾಗೂ ಕಲ್ಲು ಹರಳುಗಳ ಆಭರಣಗಳ ಹರಾಜಿನ ವಿವಿಧ ನೋಟಗಳು

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

